**ಪ್ರಸ್ತಾವನೆ:**

ಪಾವಗಡ ತಾಲ್ಲೂಕು ಹರಿಜನ ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಪಾವಗಡ ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣದಿಂದ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಶಿಫಾರಸ್ಸಿನನ್ವಯ ಈ ಕಛೇರಿಯ ಉಲ್ಲೇಖ (1)ರ ಆದೇಶದನ್ವಯ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಪಾವಗಡ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (3)ರ ಪತ್ರದೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರು ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನಾಧಿಕಾರಿಗಳ ಸಭೆ ನಡವಳಿಕೆ ದಿನಾಂಕ:25.02.2006ರಲ್ಲಿ ದಾಖಲಿಸಿರುವಂತೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/30/2002–03, ದಿನಾಂಕ:23.05.2005ರಲ್ಲಿ ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಸರ್ಕಾರದಿಂದ ಸಂಘಕ್ಕೆ ಮಂಜೂರಾಗಿದ್ದ ಸಾಲ ರೂ.14,450–00 ಮತ್ತು ಬಡ್ಡಿ ರಹಿತ ಸಾಲ ರೂ.3,420–00 ಒಟ್ಟು ರೂ.17,870–00 ಮನ್ನಾ ಮಾಡಿರುತ್ತಾರೆ. ಸಂಘದಲ್ಲಿ ನಿರ್ದಿಷ್ಟ ಹಾಗೂ ನಿಖರವಾದ ದಾಖಲಾತಿಗಳು ಸಮಾಪನಾಧಿಕಾರಿಗಳ ವಶದಲ್ಲಿ ಇಲ್ಲದ ಕಾರಣ ಸಂಘದ ಆಸ್ತಿಗಳನ್ನು ವಸೂಲಾಗದ ಆಸ್ತಿಗಳೆಂದು ತೀರ್ಮಾನಿಸಿ ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ.

ಆಸ್ತಿಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುವುದರಿಂದ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಾಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಕೆ. ಯದುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಮಾಪನೆಗೊಂಡಿರುವ ಪಾವಗಡ ತಾಲ್ಲೂಕು ಹರಿಜನ ಗಿರಿಜನ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಪಾವಗಡ ಈ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಸಿಎಸ್–1ಇ/165/62–63, ದಿನಾಂಕ:07.12.1962 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದ್ದೇನೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31.03.2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.809

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಕೆಗಳು**
**ನಂ. ಜೆ.ಆರ್‌ಬಿ/ಸಮಾಪನೆ/33/98–99, ದಿನಾಂಕ:31ನೇ ಮಾರ್ಚ್, 2008**

**ವಿಷಯ:** ಸಮಾಪನೆಗೊಂಡಿರುವ ತುಮಕೂರು ತಾಲ್ಲೂಕು ಕಾರ್ಮಿಕ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿಯಮಿತ, ತುಮಕೂರು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಜೆಆರ್‌ಬಿ/ ಸಮಾಪನೆ /33/98–99, ದಿನಾಂಕ:27.10.1998.

2) ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಪತ್ರ ಸಂಖ್ಯೆ: ಡಿಆರ್‌ಟಿ/ ಡಿಎಲ್‌ಎಸ್/103/ಸಿಆರ್–87/2000–01, ದಿನಾಂಕ:02.12.2005 ಮತ್ತು ದಿನಾಂಕ:27.12.2005.

**ಪ್ರಸ್ತಾವನೆ:**

ತುಮಕೂರು ತಾಲ್ಲೂಕು ಕಾರ್ಮಿಕ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿಯಮಿತ, ತುಮಕೂರು ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣದಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಶಿಫಾರಸ್ಸಿನನ್ವಯ ಈ ಕಛೇರಿಯ ಉಲ್ಲೇಖ (1) ರ ಆದೇಶ ದಿನಾಂಕ:27.10.1998 ರಂದು ಸಮಾಪನೆಗೊಳಿಸಿ ಹಿರಿಯ ನಿರೀಕ್ಷಕರು (ಬಳಕೆ) ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ತುಮಕೂರು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಯು ದಿನಾಂಕ:17.09.1999ರಂದು ಸಂಘದ ಪ್ರಭಾರ ಪಡೆದು ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇವಾರಿ ಮಾಡಲು ಕ್ರಮ ಇಟ್ಟಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರು ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿ ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಂಘದಲ್ಲಿ ನಗದಾಗಲಿ, ಆಸ್ತಿಗಳಾಗಲಿ ಅಥವಾ ವಸೂಲಿಯಾಗುವಂತಹ ಯಾವುದೇ ರಹ ಇಲ್ಲದ ಕಾರಣ ಸಂಘವು ಸರ್ಕಾರಕ್ಕೆ ಪಾವತಿಸಲು ಬಾಕಿ ಇದ್ದ ಷೇರು ರೂ.7000/– ಬಂಡವಾಳ ಸಾಲ ರೂ.10,000/– ಸರ್ಕಾರದ ಸಾಲದ ಬಡ್ಡಿ ರೂ.1000/– ಸರ್ಕಾರದಿಂದ ಸದಸ್ಯರ ನೋಂದಣಿಯಾಗಿ ಷೇರು, ಪ್ರವೇಶಧನ, ಷೇರು, ಫೀ ರೂ.1381–25 ಆಡಿಟ್ ಫೀ ರೂ.520/– ಒಟ್ಟು ರೂ.19901–25 ಗಳನ್ನು ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರುರವರ ಆದೇಶ ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/28/2000–01 ದಿನಾಂಕ:11.03.2005ರಲ್ಲಿ ಮನ್ನಾ ಮಾಡಿರುತ್ತಾರೆ.

ಸಮಾಪನಾಧಿಕಾರಿಗಳ ಸಭಾ ನಡವಳಿಕೆ ದಿನಾಂಕ:30.09.2005 ರನ್ವಯ ಸಂಘದ ನಿರ್ದಿಷ್ಟ ಹಾಗೂ ನಿಖರವಾದ ದಾಖಲಾತಿಗಳು ಇಲ್ಲದ ಕಾರಣ ಆಸ್ತಿಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ.

ಆಸ್ತಿಗಳನ್ನು ನಷ್ಟ ಖಾತೆಗೆ ವರ್ಗಾಯಿಸಿರುವುದರಿಂದ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಾಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿ ರದ್ದುಪಡಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಕೆ. ಯದುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಮಾಪನೆಗೊಂಡಿರುವ ತುಮಕೂರು ತಾಲ್ಲೂಕು ಕಾರ್ಮಿಕ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿಯಮಿತ, ತುಮಕೂರು ಈ ಸಂಘದ ನೋಂದಣಿ ಸಂಖ್ಯೆ:ಡಿಆರ್‌ಟಿ/436/66–67 ದಿನಾಂಕ:30.06.1966ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದ್ದೇನೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31.03.2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಕೆಗಳು**
**ನಂ. ಜೆ.ಆರ್‌ಬಿ/ಸಮಾಪನೆ/46/1998–99, ದಿನಾಂಕ:31ನೇ ಮಾರ್ಚ್, 2008**

**ವಿಷಯ:** ಸಮಾಪನೆಗೊಂಡಿರುವ ತಿಪಟೂರು ತಾಲ್ಲೂಕು ಗ್ರಾಮಾಂತರ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ ತಿಪಟೂರು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಂಖ್ಯೆ: ಜೆಆರ್‌ಬಿ/ಸಮಾಪನೆ/46/98–99 ದಿನಾಂಕ:22.02.2000.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ ಸಿಎಲ್‌ಎಂ/ 2001 ದಿನಾಂಕ:21.11.2001.
3) ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಪ್ರಸ್ತಾವನೆ ಪತ್ರ ಸಂಖ್ಯೆ: ಡಿಆರ್‌ಟಿ/ ಡಿಎಲ್‌ಎಸ್/52/2000–01, ದಿನಾಂಕ:19.03.2004.

**ಪ್ರಸ್ತಾವನೆ:**

ತಿಪಟೂರು ತಾಲ್ಲೂಕು ಗ್ರಾಮಾಂತರ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ತಿಪಟೂರು ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣದಿಂದ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಶಿಫಾರಸ್ಸಿನನ್ವಯ ಈ ಕಛೇರಿಯ ಉಲ್ಲೇಖ (1)ರ ಆದೇಶದನ್ವಯ ಸಂಘವನ್ನು ಸಮಾಪನೆಗೊಳಿಸಿ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತಿಪಟೂರು ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (3)ರ ಪತ್ರದೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರು ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಿ, ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನಾಧಿಕಾರಿಗಳ ಸಭೆ ನಡವಳಿಕೆ ದಿನಾಂಕ:29.10.2003ರನ್ವಯ ಸಂಘದಲ್ಲಿ ನಿರ್ದಿಷ್ಟ ಹಾಗೂ ನಿಖರವಾದ ದಾಖಲಾತಿಗಳು ಸಮಾಪನಾಧಿಕಾರಿಗಳ ವಶದಲ್ಲಿ ಇಲ್ಲದ ಕಾರಣ ಸಂಘದ ಆಸ್ತಿಗಳನ್ನು ವಸೂಲಾಗದ ಆಸ್ತಿಗಳೆಂದು ತೀರ್ಮಾನಿಸಿ ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ.

ಆಸ್ತಿಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುವುದರಿಂದ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಕೆ. ಯದುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಮಾಪನೆಗೊಂಡಿರುವ ತಿಪಟೂರು ತಾಲ್ಲೂಕು ಗ್ರಾಮಾಂತರ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ತಿಪಟೂರು ಈ ಸಂಘದ ನೋಂದಣಿ ಸಂಖ್ಯೆ: ಎಆರ್ 3890/1978 ದಿನಾಂಕ:23.03.1978 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದ್ದೇನೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31.03.2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.810

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18 ಇವರ ಕಾರ್ಯಾಲಯ**

**ನಂ. ಜೆ.ಆರ್.ಬಿ.ಎಲ್.ಕ್ಯೂಡಿ.23:ಎಲ್.ಎಂ.ಸಿ.2007–08, ಬೆಂಗಳೂರು, ದಿನಾಂಕ:4ನೇ ಏಪ್ರಿಲ್, 2008**

**ವಿಷಯ:** ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಸೊರಬ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗ ರವರ ಪ್ರಸ್ತಾವೆ ನಂ. ಡಿಆರ್ಎಸ್: ಸಮಾಪನೆ: ಡಿಎಲ್ಎಸ್:1290:2005–06 ದಿನಾಂಕ:25.10.2005.

2) ಈ ಕಛೇರಿ ಪತ್ರ ನಂ.ಜೆಆರ್ಎಲ್ಕ್ಯೂಡಿ23:ಎಲ್ಎಂಸಿ:2005–06 ದಿನಾಂಕ:29.11.2005.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲಾ ಸೊರಬ ತಾಲ್ಲೂಕು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಈ ಸಂಘವು ನೋಂದಣಿ ಸಂಖ್ಯೆ: ಎಡಿಎಂ.ಆರ್ಜಿಎನ್.2932:ಸಿ.ಆರ್.107:88–89 ದಿನಾಂಕ:15.03.1989ರನ್ವಯ ನೋಂದಣಿಯಾಗಿದ್ದು, ಸೊರಬ ತಾಲ್ಲೂಕಿನ ಕಾರ್ಯವ್ಯಾಪ್ತಿ ಹೊಂದಿರುತ್ತದೆ. ಈ ಸಹಕಾರ ಸಂಘ ನೋಂದಣಿಯಾಗಿರುವ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆಯೆಂದು, 2003–04ನೇ ಸಾಲಿನಿಂದ ವಾರ್ಷಿಕ ಮಹಾಸಭೆ ಹಾಗೂ ಆಡಳಿತ ಮಂಡಳಿ ಸದಸ್ಯರ ಚುನಾವಣೆ ನಡೆಸಿರುವುದಿಲ್ಲ, ಈ ಸಂಘದ ಕಾರ್ಯಚಟುವಟಿಕೆ ಬಗ್ಗೆ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ, ಯಾವುದೇ ಆಸಕ್ತಿ ಇಲ್ಲದ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಬೇಕೆಂದು ಉಲ್ಲೇಖ (1)ರ ಪತ್ರದಲ್ಲಿ ಉಪ ನಿಬಂಧಕರು, ಶಿವಮೊಗ್ಗರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವೆಯಲ್ಲಿನ ಆರೋಪಗಳಿಗೆ ಸಂಘದ ಆಡಳಿತ ಮಂಡಳಿ ಸದಸ್ಯರ ಆಕ್ಷೇಪಗಳೇನಾದರೂ ಇದ್ದಲ್ಲಿ ಉಲ್ಲೇಖ (2)ರ ನೋಟೀಸನ್ನು ನೀಡಿದ್ದು, 15 ದಿನಗಳೊಳಗಾಗಿ ಉತ್ತರ ನೀಡಲು ನೋಟೀಸಿನಲ್ಲಿ ತಿಳಿಸಿ, ನೋಟೀಸನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಮೂಲಕ ಜಾರಿ ಮಾಡಲಾಗಿ ಸದರೀ ನೋಟೀಸನ್ನು ಸ್ವೀಕರಿಸಿದ್ದರೂ, ಆಡಳಿತ ಮಂಡಳಿ ಸದಸ್ಯರಾರೂ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರೀ ವಿಷಯದಲ್ಲಿ ಅವರ ಆಕ್ಷೇಪಣೆಗಳು ಏನೂ ಇಲ್ಲವೆಂದು ಭಾವಿಸಿರುತ್ತದೆ, ಹಾಗೂ ನೋಟೀಸಿನಲ್ಲಿ ತಿಳಿಸಿರುವ ನ್ಯೂನತೆಗಳು ಆರೋಪಗಳು ನಿಜವೆಂದು ಒಪ್ಪಿ ಸಮಾಪನೆಗೊಳಿಸಲು ಆಕ್ಷೇಪಣೆ ಇರುವುದಿಲ್ಲವೆಂದು ಒಪ್ಪಿಗೆ ಇರುವುದರಿಂದ ಹಾಗೂ ಮೇಲ್ಕಂಡ ಸಂದರ್ಭಗಳಲ್ಲಿ ತಿಳಿಸಿರುವ ಕಾರಣಗಳ ಪ್ರಕಾರ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ;21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಕೆ. ಯಧುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಬೆಂಗಳೂರು, ಆದ ನಾನು ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಸೊರಬ, ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ, ಕಲಂ 73ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಸೊರಬ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 4ನೇ ಏಪ್ರಿಲ್ 2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18 ಇವರ ಕಾರ್ಯಾಲಯ**

**ನಂ. ಜೆ.ಆರ್.ಬಿ.ಎಲ್.ಕ್ಯೂ.ಡಿ.34/4:ಎಲ್.ಎಂ.ಸಿ.2007-08, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2008**

**ವಿಷಯ:** ಸಮಾಪನೆಯಲ್ಲಿರುವ ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ಜಿಲ್ಲೆ, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಜೆಆರ್‌ಬಿ: ಎಲ್‌ಕ್ಯೂಡಿ:34: ಎಲ್‌ಎಂಸಿ:2004-05, ದಿನಾಂಕ:24.11.2005.

2) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗರವರ ಪ್ರಸ್ತಾವೆ ನಂ.ಡಿಆರ್‌ಎಸ್: ಸಮಾಪನೆ: ಡಿಎಲ್‌ಎಸ್:476:2005-06, ದಿನಾಂಕ:31.03.2006.

**ಪ್ರಸ್ತಾವನೆ:**

ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ಜಿಲ್ಲೆ ಈ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಎಸ್: ನೊಂದಣಿ:20461:97-98 ದಿನಾಂಕ:24.02.1998 ರನ್ವಯ ನೋಂದಣಿಯಾಗಿದ್ದು, ಶಿವಮೊಗ್ಗ ತಾಲ್ಲೂಕಿನ ಕಾರ್ಯವ್ಯಾಪ್ತಿ ಹೊಂದಿರುತ್ತದೆ. ಈ ಸಹಕಾರ ಸಂಘ ನೋಂದಣಿಯಾಗಿರುವ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆಯೆಂದು, 2004-05ನೇ ಸಾಲಿನಿಂದ ವಾರ್ಷಿಕ ಮಹಾಸಭೆ ಹಾಗೂ ಆಡಳಿತ ಮಂಡಳಿ ಸದಸ್ಯರ ಚುನಾವಣೆ ನಡೆಸಿರುವುದಿಲ್ಲ, ಈ ಸಂಘದ ಕಾರ್ಯಚಟುವಟಿಕೆ ಬಗ್ಗೆ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ ಯಾವುದೇ ಆಸಕ್ತಿ ಇಲ್ಲದ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ರನ್ವಯ ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ ಮಾರಾಟಾಧಿಕಾರಿ (1) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ:24.11.2005ರಂದು ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ.

ಪ್ರಭಾರ ವಹಿಸಿಕೊಂಡ ಸಮಾಪನಾಧಿಕಾರಿಯವರು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇಗೊಳಿಸಲು ಕ್ರಮವಿಟ್ಟಿರುತ್ತಾರೆಂದು, ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುವುದರಿಂದ ಕಲಂ 75 ರನ್ವಯ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಉಲ್ಲೇಖ (2) ರ ಪತ್ರದಲ್ಲಿ ಉಪ ನಿಬಂಧಕರು, ಶಿವಮೊಗ್ಗರವರು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಸರ್ಕಾರದ ವಿನಿಯೋಗಗಳು ಯಾವುದೂ ಇರುವುದಿಲ್ಲ. ಸದಸ್ಯರಿಗೆ ಷೇರು ಹಣ ಹಂಚಿಕೆ ಮಾಡಿರುತ್ತಾರೆ. ವಸೂಲಾತಿಗೆ ಸಾದ್ಯವಾಗದ ಇತರೆ ಆಸ್ತಿ-ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿಸಿರುತ್ತಾರೆ ಹಾಗೂ ದಿನಾಂಕ:08.03.2006 ರಂದು ಸಮಾಪನಾಧಿಕಾರಿಯವರು ಠರಾವು ಪಾಸು ಮಾಡಿದ್ದು ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಇವರ ನಿಲುವನ್ನು ಪುಷ್ಟೀಕರಿಸಿರುವ ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗ ಜಿಲ್ಲೆ ಇವರು ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಂಡಿದ್ದು, ಸರ್ಕಾರದ ವಿನಿಯೋಗಗಳೇನು ಇಲ್ಲದ ಪ್ರಯುಕ್ತ ನೋಂದಣಿ ಸಂಖ್ಯೆ ರದ್ದುಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಅಡಾವೆ ಪತ್ರಿಕೆ ಶೂನ್ಯವಾಗಿರುವ ಪ್ರಯುಕ್ತ ಹಾಗೂ ಸರ್ಕಾರದ ವಿನಿಯೋಗಗಳು, ಸ್ಥಿರಾಸ್ತಿಗಳು ಯಾವುದೂ ಇಲ್ಲದ ಪ್ರಯುಕ್ತ ಸಂಘವನ್ನು ಸಮಾಪನಾವಸ್ಥೆಯಲ್ಲಿಯೇ ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲದಿರುವುದನ್ನು ಮನಗಂಡು ಸಹಕಾರ ಸಂಘಗಳ ಉಪನಿಬಂಧಕರು ಶಿವಮೊಗ್ಗ ಜಿಲ್ಲೆ ಇವರ ಶಿಫಾರಸ್ಸಿನನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದು ಪಡಿಸುವುದೇ ಸೂಕ್ತವೆಂದು ಪರಿಗಣಿಸಲಾಗಿದ್ದು, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69: ಸಿಎಲ್ಎಂ:2001 ದಿನಾಂಕ;21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಕೆ. ಯಧುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಬೆಂಗಳೂರು, ಆದ ನಾನು ಶಿವಮೊಗ್ಗ ತಾಲ್ಲೂಕು ಕುಕ್ಕುಟ ಪಾಲಕರ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ಜಿಲ್ಲೆ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಡಿಆರ್ಎಸ್:ನೊಂದಣಿ:20461: 97–98, ದಿನಾಂಕ:24.02.1998 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33ರನ್ವಯ 03 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪವಿಭಾಗ ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2008 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.811

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್.ನಂ.168/2004–05, ದಿನಾಂಕ:18ನೇ ಜುಲೈ, 2008**

**ಆರಕ್ಷಕ ಉಪ ನಿರೀಕ್ಷಕರು, ತರೀಕೆರೆ ಪೋಲೀಸ್ ಠಾಣೆ ಕ್ರೈಂ ನಂ.171/2004, ದಿನಾಂಕ:10.12.2004**

**ಅಬಕಾರಿ ಉಪ ನಿರೀಕ್ಷಕರು, ತರೀಕೆರೆ ಉಪವಲಯ ಇವರ ಪ್ರ.ಮಾ.ವ. ಸಂಖ್ಯೆ:15/2004–05, ದಿನಾಂಕ:18.03.2005**

**ಉಪಸ್ಥಿತರು:** ಕೆ.ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಪಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ತರೀಕೆರೆ ತಾಲ್ಲೂಕು. | ಆರೋಪಿಗಳು ಪತ್ತೆಯಾಗಿರುವುದಿಲ್ಲ. |

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ:09.12.2004ರಂದು ತರೀಕೆರೆ ಪೊಲೀಸ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಗಳಾದ ಹೆಚ್.ಸಿ.177, ಹೆಚ್.ಸಿ. 38, ಪಿ.ಸಿ.235, 82, 420, 386, 134, 170, ಪಿ.ಸಿ.584 ಮತ್ತು ಸಾರಾಯಿ ಕಂಪನಿಯ ಸಿಬ್ಬಂದಿಗಳಾದ ಚಲುವೇಗೌಡ, ಅಶ್ವಥ್, ನವೀನ, ಯೋಗೀಶ್‌ರವರೊಂದಿಗೆ ಹಾಗೂ ಪಂಚರೊಂದಿಗೆ ಸಾರಾಯಿ ಕಂಪನಿಯ ವಾಹನಗಳಾದ ಕೆಎ–02–6136, ಹಾಗೂ ಕೆಎ–14–ಎಂಡಿ:4004 ರ ಜೀಪುಗಳಲ್ಲಿ ರಾತ್ರಿ 10.00 ಗಂಟೆಗೆ ಕರೆದುಕೊಂಡು ಕೋಡಿಕ್ಯಾಂಪ್ ಮುಖಾಂತರ ಲಿಂಗದಹಳ್ಳಿ ಕಡೆಗೆ ಹೋಗುವ ರಸ್ತೆಯಲ್ಲಿ ಹೋಗಿ ಗಾಳಿಹಳ್ಳಿ ಕ್ರಾಸ್‌ನ ಬನಶಂಕರಿ ದೇವಸ್ಥಾನದ ಹತ್ತಿರ ಸಿಬ್ಬಂದಿಗಳೊಂದಿಗೆ ಅಕ್ರಮ ಸಾರಾಯಿ ವಾಹನ ಬರುತ್ತಿರುವುದನ್ನು ನಿರೀಕ್ಷೆಯಲ್ಲಿ ಕಾಯುತ್ತಿರುವಾಗ ತರೀಕೆರೆ ನಗರದ ಕೆ.ಇ.ಬಿ. ರಸ್ತೆ ಕಡೆಯಿಂದ ಒಂದು ಹಸಿರು ಬಣ್ಣದ ಅಂಬಾಸಿಡರ್ ಕಾರ್ ಬಂದಿದ್ದು ಪೊಲೀಸ್‌ರನ್ನು ನೋಡಿ ಕಾರಿನ ಚಾಲಕ ಪುನಃ ಕೋಡಿಕ್ಯಾಂಪ್ ಕಡೆ ಹೋಗಿ ನಂತರ ಜನತಾ ಕಾಲೋನಿ ಕಡೆ ಹೋಗುವ ರಸ್ತೆಯಲ್ಲಿ ವೇಗವಾಗಿ ಹೋಗುತ್ತಿದ್ದನ್ನು ಕಂಡು ಜೀಪ್‌ಗಳಲ್ಲಿ ಬೆನ್ನಟ್ಟಿ ಹೋದಾಗ ಕಾರಿನ ಚಾಲಕ ಬನಶಂಕರಿ ಕಾಲೋನಿಗೆ ಹೋಗುವ ರಸ್ತೆಯ ಪಕ್ಕ ಇರುವ ಶಂಕರ್ ಎಂಬುವವರ ಮನೆಯ ಎದುರಿಗೆ ಕಾರನ್ನು ಅಲ್ಲಿಯೇ ನಿಲ್ಲಿಸಿ ಸ್ಥಳದಿಂದ ಪರಾರಿಯಾಗಿರುತ್ತಾರೆ. ಶಂಕರ್‌ರವರ ಮನೆಯ ಬ್ಯಾಟರಿ ಹಾಗೂ ಜೀಪ್‌ಗಳ ಬೆಳಕಿನ ಸಹಾಯದಿಂದ ಕಾರನ್ನು

ಪಂಚರ ಸಮಕ್ಷಮ ಅನುಮಾನಿಸಿ ನೋಡಲಾಗಿ ಸದರಿ ಕಾರ್‌ನಲ್ಲಿ 4 ಬಿಳಿ ಬಣ್ಣದ ಗೋಬ್ಬರದ ಚೀಲಗಳಲ್ಲಿ ಸಾರಾಯಿ ಪ್ಯಾಕೆಟ್‌ಗಳನ್ನು ತುಂಬಿ ಬಾಯಿ ಕಟ್ಟಿದ್ದು ಸದರಿ ಚೀಲಗಳ ಬಾಯನ್ನು ಬಿಚ್ಚಿ ಏಣಿಕೆ ಮಾಡಿ ನೋಡಲಾಗಿ 100 ಎಂ.ಎಲ್.ನ ಸಾರಾಯಿ ಪ್ಯಾಕೆಟ್‌ಗಳಾಗಿದ್ದು ಒಟ್ಟು 800 ಪ್ಯಾಕೆಟ್‌ಗಳಿದ್ದು ಅವುಗಳ ಮೇಲೆ 100 ಎಂ.ಎಲ್. ಎಂಡಮ್ ಮುದ್ರೆಯಿದ್ದು, ಬಗ್ಗದನಾಳ್, ಹರಿಹರ ತಾಲ್ಲೂಕು ಎಂದು ಸೀಲ್ ಇದ್ದು ಸದರಿ ಪ್ಯಾಕೆಟ್‌ಗಳನ್ನು ಮುಂದಿನ ನಡವಳಿಕೆ ಬಗ್ಗೆ ವಶಪಡಿಸಿಕೊಂಡು ಪ್ಯಾಕೆಟ್‌ನ ಬೆಲೆಯು ರೂ.8,000/– ಗಳು ಆಗಬಹುದೆಂದು ತಿಳಿದು ಬಂತು. ಕಾರನ್ನು ಪರಿಶೀಲಿಸಲಾಗಿ ಅದು ಹಸಿರು ಬಣ್ಣದ ಅಂಬಾಸಿಡರ್ ಕಾರ್ ಆಗಿದ್ದು, ಹಿಂದೆ ಮುಂದೆ ಬಿಳಿ ಬೋರ್ಡ್ ಮೇಲೆ ಎಂ.ಇ.ಬಿ.5036 ಎಂಬ ಸಂಖ್ಯೆ ಇದ್ದು ಸದರಿ ಕಾರಿನ ಬೆಲೆ ರ.1,25,000/– ಗಳು ಎಂದು ತಿಳಿದು ಬಂದಿರುತ್ತದೆ. ಕಾರನ್ನು ಕೂಡ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿ ರಾತ್ರಿ 11.15 ರಿಂದ 12.00 ಗಂಟೆಯವರೆಗೆ ಮಹಜರ್ ಕ್ರಮ ಜರುಗಿಸಿ, ಅಂಬಾಸಿಡರ್ ಕಾರನ್ನು ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು, ಠಾಣೆಗೆ ಬಂದು ಕ್ರೈಂ ನಂ.171/ 2004, ದಿನಾಂಕ;10.12.2004 ರಂದು ಮೊಕದ್ದಮೆಯನ್ನು ದಾಖಲು ಮಾಡಿ ಪ್ರ.ಮಾ.ವ. ವರದಿಯನ್ನು ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಸಲ್ಲಿಸಿ ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ತರೀಕೆರೆ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ. ಸದರಿಯವರು ತನಿಖೆಯನ್ನು ಮುಂದುವರೆಸಿ ಪ್ರ.ಮಾ.ವ. ಸಂಖ್ಯೆ:15/2004–05, ದಿನಾಂಕ:18.03.2005ರಂದು ಮೊಕದ್ದಮೆ ದಾಖಲು ಮಾಡಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸಾರಾಯಿ ಸ್ಯಾಚೆಟ್‌ಗಳಿಗೆ ಸಂಬಂಧಿಸಿದಂತೆ, ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯ ಅಡಿಯಲ್ಲಿ ಪ್ರಾರಂಭಿಸಿ ವಾಹನ ಮಾಲೀಕತ್ವದ ಹಾಗೂ ಮೌಲ್ಯ ದೃಢೀಕರಣ ಪತ್ರ ಕೋರಿ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಗಳನ್ನು ಮುಂದುವರಿಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರು "ಬಿ" ಎಕ್ಸ್‌ಟ್ರಾಕ್ಟ್ ನೀಡಿದ್ದು ದಿನಾಂಕ:31.03.1995ರಿಂದ ಐ.ಪಿ. ಬಸವರಾಜು ಬಿನ್ ಟಿ.ಎಂ. ಪಾರ್ವತಪ್ಪ, ಪಂಚಕಲ್ಲಯ್ಯ ಸ್ಟ್ರೀಟ್, ತರೀಕೆರೆ ತಾಲ್ಲೂಕು ಇವರು ವಾಹನದ ಮಾಲೀಕರಾಗಿರುವುದು ಕಂಡುಬಂದಿರುತ್ತದೆ. ಸದರಿಯವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೋಟಿಸ್ ನೀಡಲಾಗಿದ್ದು ಈ ಸಂಬಂಧ ಸದರಿಯವರು ಐ.ಜೆ. ಶಿವಕುಮಾರ್, ನ್ಯಾಯವಾದಿ, ಚಿಕ್ಕಮಗಳೂರು ಇವರ ಮುಖಾಂತರ ದಿನಾಂಕ:30.12.2005ರಲ್ಲಿ ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿಯಲ್ಲಿ ಶ್ರೀ ಟಿ.ಎಸ್. ದೀಪು ಬಿನ್ ಲೇಟ್ ಕುಮಾರಸ್ವಾಮಿ, ದಾಸರ ಬೀದಿ, ಕಸಬಾ ಟೌನ್, ತರೀಕೆರೆ ತಾಲ್ಲೂಕು, ಇವರಿಗೆ ದಿನಾಂಕ:20.03.2003 ರಂದು ಮಾರಾಟ ಮಾಡಿರುವುದಾಗಿ ಶುದ್ಧ ಕ್ರಯಕ್ಕೆ ಒಪ್ಪಂದ ಕರಾರು ಪತ್ರವನ್ನು ಸಲ್ಲಿಸಿರುತ್ತಾರೆ.

ಶ್ರೀ ಟಿ.ಎಸ್. ದೀಪು ಬಿನ್ ಲೇಟ್ ಕುಮಾರಸ್ವಾಮಿ, ದಾಸರ ಬೀದಿ, ಕಸಬಾ ಟೌನ್, ತರೀಕೆರೆ ತಾಲ್ಲೂಕು, ಇವರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಅಡಿಯಲ್ಲಿ ನೋಟಿಸ್ ನೀಡಲಾಗಿದ್ದು ಈ ಸಂಬಂಧ ಸದರಿಯವರು ದಿನಾಂಕ:05.05.2006 ರಂದು ಅರ್ಜಿ ಸಲ್ಲಿಸಿ ಪ್ರಕರಣದಲ್ಲಿ ಜಫ್ತಾಗಿರುವ ವಾಹನವು ನಾನು ಊರಿನಲ್ಲಿ ಇಲ್ಲದೆ ಇದ್ದ ಸಮಯದಲ್ಲಿ ಡ್ರೈವರ್ ಈ ಕೆಲಸ ಮಾಡಿರುತ್ತಾನೆ ಇದು ತಪ್ಪೆಂದು ಒಪ್ಪಿಕೊಳ್ಳುತ್ತೇನೆ. ಹಾಗೂ ವಾಹನವನ್ನು ಪಡೆಯಲು ಆರ್ಥಿಕ ತೊಂದರೆ ಇರುವುದರಿಂದ ಸಾಧ್ಯವಾಗುವುದಿಲ್ಲ. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನನ್ನ ಅಭ್ಯಂತರವೇನು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಫ್ತುಪಡಿಸಿದ ವಾಹನ ಮತ್ತು 100 ಎಂ.ಎಲ್.ನ 800 ಸಾರಾಯಿ ಸ್ಯಾಚೆಟ್‌ಗಳ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ಹೊರತುಪಡಿಸಿ ಇನ್ನುಳಿದ 100 ಎಂ.ಎಲ್.ನ 798 ಸಾರಾಯಿ ಸ್ಯಾಚೆಟ್‌ಗಳನ್ನು ಅಬಕಾರಿ ಅಧೀಕ್ಷಕರು, ಜಿಲ್ಲಾ ವಿಚಕ್ಷಣ ದಳ, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಡಿಇಐಬಿ/ಸಿಆರ್‌ಎಂ/ಮುಟ್ಟುಗೋಲು/7/2007–08, ದಿನಾಂಕ:28.11.2007ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ನಾಶಪಡಿಸಲಾಯಿತು.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರ ಅರ್ಜಿಯ ಮೇರೆಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಶಪಡಿಸಿಕೊಂಡ ವಾಹನ ಮುಟ್ಟುಗೋಲಿನ ನಡವಳಿಗಳು ಪೂರ್ಣಗೊಂಡಿದ್ದು, ಜಫ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)

ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನ ಸಂಖ್ಯೆ: ಎಂ.ಇ.ಬಿ.–5036 (ಅಂಬಾಸಿಡರ್ ಕಾರ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 18ನೇ ಜುಲೈ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶದ ದಿನಾಂಕದಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಆರ್.905

**DEPARTMENT OF MINES AND GEOLOGY, BANGALORE**

**NOTIFICATION NO.DMG/AML/ADV/08-09, DATED:3RD APRIL, 2009**

It is hereby informed for the mining public that the area noted below is available for re-grant under rule 59(1) of MCR 1960 as under:

1) This area is available for grant to the general public from the date of notification in the official gazette for a period of 60 days.

2) The applications will be received over this area from general public from the date of notification in the official gazette for a period of 60 days.

3) If the last day for receipt of application happens to be public holiday or general holiday, the application will be accepted on the next working day.

4) Any applications received after 60 days from the date of notification in official gazette days will not be considered.

The sketch of the area is available for verification at the office of the Director, Department of Mines and Geology, Khanijabhavan, Race Course Road, Bangalore-01 during working hours on all working days.

The prescribed applications and the sketches of the notified area can be obtained from the office of the Director, Department of Mines and Geology, Khanijabhavan, Race Course Road, Bangalore-01 on payment of prescribed fees.

The mining public should note the availability of the area published below is subject to the clearance from the Revenue Department, for mining activities and compliance of the provisions of the MM(D&R) Act 1957 and MCR 1960 and all other relevant acts and rules by the applicants. In case, the area is found to consists of forest lands, the clearance from the forest department under section 2 of the Forest (Conservation) Act 1980, for utilizing the area for non-forest activities should be obtained by the applicant.

Interested persons are advised to inspect the area, satisfy themselves, about the availability of mineral deposits (as the area is determined ML) and the present status of the land there in before making application for mining lease.

| Sl. No. | Mineral | Extent | Sy.No. | Location |
|---|---|---|---|---|
| 1. | Limestone | 310 Acres | 851 | Kodla Village, Sedam Taluk, Gulbarga District. |

Director,
Department of Mines and Geology, Bangalore.




PR-348

Director,
Department of Mines and Geology, Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, (2ನೇ ವಲಯ) ಹಾಗೂ ವಸೂಲಾಧಿಕಾರಿಗಳು, ನಂ.146, 3ನೇ ಮುಖ್ಯ ರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ, ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ ಬೆಂಗಳೂರು ಇವರ ನಡವಳಿಕೆಗಳು**

**ಸಿಇಪಿ ಸಂಖ್ಯೆ: ಎಆರ್ಇ./ ಯು.ಬಿ.ಎಫ್/10018/2005–06, ದಿನಾಂಕ:29ನೇ ಅಕ್ಟೋಬರ್, 2005**

**ವಿಷಯ:** ದಿ ಭಾರತ್ ಕೋ–ಆಪರೇಟಿವ್ ಬ್ಯಾಂಕ್ ಲಿ., ನಂ.30, 15ನೇ ಕ್ರಾಸ್, ಜಯನಗರ 3ನೇ ಬ್ಲಾಕ್, ಬೆಂಗಳೂರು–560011 ಈ ಬ್ಯಾಂಕಿನ ಅಮಲ್ಜಾರಿ ಸಂಖ್ಯೆ: ಎಆರ್ಇ/ಯು.ಬಿ.ಎಫ್/10018/2005–06ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7)(ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: ಜೆ.ಆರ್.ಡಿ./ಯು.ಬಿ.ಎಫ್–ಎಸ್/1833/2005–06, ದಿನಾಂಕ:22.07.2005.

2) ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್ಇ/ಯು.ಬಿ.ಎಫ್/10018/2005–06, ದಿನಾಂಕ:29.10.2005.

3) ಮಾರಾಟಾಧಿಕಾರಿ ದಿ ಭಾರತ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ಇವರ ವರದಿ ದಿನಾಂಕ:18.02.2009.

ಶ್ರೀಮತಿ ಟಿ. ಇಂದಿರಮ್ಮ W/o ವಿ. ಶ್ರೀಧರ್ ನಂ.10017/147/35A, ಅಂಬೇಡ್ಕರ್ ನಗರ, ಮೈಸೂರು ರಸ್ತೆ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಇವರು ದಿ ಭಾರತ್ ಕೋ–ಆಪರೇಟಿವ್ ಬ್ಯಾಂಕ್ ಲಿ., ನಂ.30, 15ನೇ ಮುಖ್ಯ ರಸ್ತೆ, ಜಯನಗರ 3ನೇ ಬ್ಲಾಕ್, ಬೆಂಗಳೂರು–560011 ಈ ಬ್ಯಾಂಕಿನಲ್ಲಿ ಸದಸ್ಯತ್ವ ಸಂಖ್ಯೆ: 38793 ಸದಸ್ಯರಾಗಿ ಸಾಲ ತೀರಿಸುವ ಉದ್ದೇಶಕ್ಕಾಗಿ ದಿನಾಂಕ:08.10.2002 ರಂದು ರೂ.2,50,000/– (ರೂ. ಎರಡು ಲಕ್ಷದ ಐವತ್ತು ಸಾವಿರಗಳು ಮಾತ್ರ) ಗಳನ್ನು ಸಾಲವಾಗಿ ಪಡೆದು ಸದರಿ ಸಾಲವನ್ನು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಬ್ಯಾಂಕಿನ ಕಾರ್ಯದರ್ಶಿಯವರು ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ನಿಯಮ 441, ದಾವಾ ಪಂಚಾಯ್ತಿ ನ್ಯಾಯಾಲಯ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿದ್ದು, ದಾವಾ ಸಂಖ್ಯೆ ಜೆ.ಆರ್.ಡಿ/ಯುಬಿಎಫ್.ಎಸ್/1833/2005–06 ದಿನಾಂಕ:22.07.2005ರಂತೆ ಆದೇಶ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶಾನುಸಾರ, ದಿ ಭಾರತ್ ಕೋ–ಆಪರೇಟಿವ್ ಬ್ಯಾಂಕಿನ ಕಾರ್ಯದರ್ಶಿಯವರು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 34(1)ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, (ನಿಯಮ 441) ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಕೆ.ಹೆಚ್.ರಸ್ತೆ, ಬೆಂಗಳೂರು–27 ಇವರ ಕಛೇರಿಯಲ್ಲಿ ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್ಇ/ಯುಬಿಎಫ್/10018/2005–06 ರಂತೆ ಕ್ರಮ ತೆಗೆದುಕೊಳ್ಳಲು ದಾಖಲು ಮಾಡಿದ್ದು, ಸದರಿ ಅಮಲ್ಜಾರಿ ಅರ್ಜಿಯನ್ನು ದಿ ಭಾರತ್ ಕೋ–ಆಪರೇಟಿವ್ ಬ್ಯಾಂಕ್‌ನ ಮಾರಾಟಾಧಿಕಾರಿಯವರಿಗೆ ವಿಲೇವಾರಿಗಾಗಿ ವಹಿಸಲಾಗಿತ್ತು. ಸದರಿ ಬ್ಯಾಂಕಿನ ಮಾರಾಟಾಧಿಕಾರಿಯವರು, ಈ ಅಮಲ್ಜಾರಿ ಅರ್ಜಿಯನ್ನು ಕಾರ್ಯಗತಗೊಳಿಸಲು ಬಾಕಿದಾರರಾದ ಶ್ರೀಮತಿ ಟಿ. ಇಂದಿರಮ್ಮನವರು ಬ್ಯಾಂಕಿಗೆ ಈಡು ಮಾಡಿದ್ದ ಆಸ್ತಿ ಸಂಖ್ಯೆ: 10017/147/35A ಅಂಬೇಡ್ಕರ್‌ನಗರ, ಮೈಸೂರು ರಸ್ತೆ, ಕನಕಪುರ ಟೌನ್, ರಾಮನಗರ ಜಿಲ್ಲೆ, ಈ ಸ್ಥಿರಾಸ್ತಿಯನ್ನು ದಿನಾಂಕ:27.12.2008ರಂದು ಸಾರ್ವಜನಿಕ ಹರಾಜಿಗೆ ತಂದು ಮಾರಾಟ ಮಾಡಿರುತ್ತಾರೆ. ದಿನಾಂಕ:27.12.2008ರಂದು ನಡೆಸಿದ ಸಾರ್ವಜನಿಕ ಹರಾಜಿನಲ್ಲಿ ಒಟ್ಟು 26 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ 1ನೇ ಬಿಡ್ಡುದಾರರಾದ ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ. ಸೂರಯ್ಯ ಇವರು ರೂ.8,85,000/– ಗಳಿಗೆ (ಎಂಟು ಲಕ್ಷ ಎಂಬತ್ತೈದು ಸಾವಿರ ರೂಪಾಯಿಗಳು) ಬಿಡ್ ಮಾಡಿ ಅತೀ ಹೆಚ್ಚಿನ ಬಿಡ್ಡುದಾರರಾದ ಪ್ರಯುಕ್ತ ಬ್ಯಾಂಕಿನ ಮಾರಾಟಾಧಿಕಾರಿಯವರು ಹರಾಜಿನ ಬಿಡ್ಡನ್ನು ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ. ಸೂರಯ್ಯರವರ ಹೆಸರಿಗೆ ನಿಲ್ಲಿಸಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಪ್ರಕಾರ ಅಸಲು, ಬಡ್ಡಿ ಮತ್ತು ಇತರೆ ವೆಚ್ಚ ಸೇರಿ ಒಟ್ಟು ರೂ.5,20,000/– ಮತ್ತು ದಿನಾಂಕ:13.12.2008ರಿಂದ ಬರಬೇಕಾದ ಬಡ್ಡಿ ಮತ್ತು ಇತರೆ ಖರ್ಚುಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ಮಾರಾಟಾಧಿಕಾರಿಯವರು ಹರಾಜಿಗೆ ತಂದಿರುವ ಆಸ್ತಿಯ ಮೌಲ್ಯವನ್ನು ರಿಜಿಸ್ಟರ್ಡ್ ಮೌಲ್ಯಮಾಪಕರು ರೂ.8,20,000/– ಗಳಿಗೆ ಮೌಲ್ಯಮಾಪನ ಮಾಡಿರುತ್ತಾರೆ. ಬಹಿರಂಗ ಹರಾಜಿನಲ್ಲಿ ಶ್ರೀಮತಿ ಟಿ. ಇಂದಿರಮ್ಮನವರ ಆಸ್ತಿಯನ್ನು ಖರೀದಿಸಿದ ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ. ಸೂರಯ್ಯನವರು ಬಿಡ್ ಮೊತ್ತದ ಶೇ.15ರಷ್ಟು ಮೊಬಲಗನ್ನು ಅಂದರೆ ರೂ.1,35,000/– ಗಳನ್ನು ಹರಾಜಿನ ಸ್ಥಳದಲ್ಲಿಯೇ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುತ್ತಾರೆ. ಉಳಿಕೆ ಬಾಕಿ ಹಣ ಮತ್ತು ನೋಂದಣಿ ವೆಚ್ಚವನ್ನು ನಿಗದಿತ ಅವಧಿಯಲ್ಲಿ ಪಾವತಿಸಿರುವುದಾಗಿ ಬ್ಯಾಂಕಿನ ಮಾರಾಟಾಧಿಕಾರಿಗಳು ವರದಿ ಮಾಡಿರುತ್ತಾರೆ.

ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:27.12.2008ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ನಡವಳಿಕೆಯನ್ನು ಮಾಡಿ ಶ್ರೀಮತಿ ಟಿ. ಇಂದಿರಮ್ಮರವರ ಸ್ಥಿರ ಸ್ವತ್ತನ್ನು ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ. ಸೂರಯ್ಯನವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:27.12.2008ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 26 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ.ಸೂರಯ್ಯ ಇವರಿಗೆ ರೂ.8,85,000.00 (ಎಂಟು ಲಕ್ಷದ ಎಂಬತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದುಬಂದಿರುತ್ತದೆ. ಬಹಿರಂಗ ಹರಾಜು ನಡೆದ 45 ದಿನಗಳೊಳಗಾಗಿ ಬಾಕಿದಾರರು ವಾದಿ ಬ್ಯಾಂಕಿಗೆ ಪಾವತಿಸಬೇಕಾದ ಬಾಕಿ ಸಾಲವನ್ನು ಮರುಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಈ ಕಛೇರಿಗೆ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವುದರಿಂದ, ದಿನಾಂಕ:27.12.2008ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಹರಾಜನ್ನು ಸ್ಥಿರೀಕರಣಗೊಳಿಸಬಹುದೆಂದು ಉಲ್ಲೇಖ (3)ರಂತೆ ಸಲ್ಲಿಸಿರುವ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆಯೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಶ್ರೀ ಎಸ್. ಮೆಹಬೂಬ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಹಾಗೂ ವಸೂಲಾಧಿಕಾರಿಗಳು, ಮಾರ್ಗೋಸ ರಸ್ತೆ, ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/295/CLM/2005-06 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) (ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: ಎ.ಆರ್.ಇ./ಯುಬಿಎಫ್/10018/2005-06 ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಶ್ರೀಮತಿ ಟಿ. ಇಂದಿರಮ್ಮ, ಬ್ಯಾಂಕಿನ ಸದಸ್ಯತ್ವದ ಸಂಖ್ಯೆ: 38793 ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:27.12.2008ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀ ಸಿ.ಎಸ್. ಚಂದ್ರಶೇಖರ್ S/o ಸಿ. ಸೂರಯ್ಯ, ಚಿಕ್ಕಾಲಹಳ್ಳಿ, ಸಾತನೂರು ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಇವರು ಅತಿ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.8,85,000/- (ಎಂಟು ಲಕ್ಷದ ಎಂಬತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಆಸ್ತಿ ಸಂ.10017/147/ 35A ಅಂಬೇಡ್ಕರ್ ನಗರ, ಮೈಸೂರು ರಸ್ತೆ, ಕನಕಪುರ ಟೌನ್, ರಾಮನಗರ ಜಿಲ್ಲೆ, ಈ ಸ್ವತ್ತಿನ ಅಳತೆ ಉತ್ತರ ದಕ್ಷಿಣ 35 ಅಡಿಗಳು, ಪೂರ್ವ ಪಶ್ಚಿಮ 35 ಅಡಿಗಳು ಅಳತೆಯುಳ್ಳ ನಿವೇಶನಕ್ಕೆ ಚೆಕ್ಕುಬಂದಿ:

ಪೂರ್ವಕ್ಕೆ: ಗೌರಮ್ಮನವರ ಸ್ವತ್ತು
ಪಶ್ಚಿಮಕ್ಕೆ: ರಾಮಚಂದ್ರಯ್ಯನವರ ಸ್ವತ್ತು
ಉತ್ತರಕ್ಕೆ: ರಸ್ತೆ
ದಕ್ಷಿಣಕ್ಕೆ: ಪುಟ್ಟಕ್ಕಿಗೌಡರ ಸ್ವತ್ತು
ಮಾರಾಟವಾದ ಮೊಬಲಗು: ರೂ.8,85,000.00
ಮಾರಾಟ ಮಾಡಿದ ದಿನಾಂಕ:27.12.2008

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:20.02.2009 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (2ನೇ ವಲಯ), ಹಾಗೂ
ವಸೂಲಾಧಿಕಾರಿಗಳು, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ,
ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ, ಬೆಂಗಳೂರು-560 003.

ಪಿ.ಡಿ.13

**HIGH COURT OF KARNATAKA**

**NOTIFICATION**

**No. RPS.171/1994, Bangalore, Dated:1st April, 2009**

Under Section 123 of the Code of Civil Procedure, 1908 (Central Act 5 of 1908) as amended by Act 104 of 1976, the Hon'ble Chief Justice is pleased to re-constitute the Rule Committee as under, with immediate effect:

| | | |
|---|---|---|
| 1) | Hon'ble Shri Justice V.G. Sabhahit | Chairman |
| 2) | Hon'ble Shri Justice K.L. Manjunath | Member |
| 3) | Hon'ble Shri Justice N. Ananda | Member |
| 4) | Sri Udaya Holla, Senior Advocate | Member |
| 5) | Sri Ravivarma Kumar, Senior Advocate | Member |
| 6) | The Prl. City Civil & Sessions Judge, City Civil Court, Bangalore | Member |
| 7) | The Registrar General, High Court of Karnataka | Secretary |

By Order of the Hon'ble Chief Justice,

PR-313

**R.B. BUDHIHAL**

Registrar General.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು

**ನಂ.ಜೆ.ಆರ್.ಬಿ.ಎಲ್.ಕ್ಯೂ.ಡಿ6/1: ಎಲ್.ಎಂ.ಸಿ.:2007-08, ದಿನಾಂಕ:31ನೇ ಮಾರ್ಚ್, 2008**

**ವಿಷಯ:** ಸಮಾಪನೆಯಲ್ಲಿರುವ ಭದ್ರಾವತಿ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ. ಭದ್ರಾವತಿ, ಶಿವಮೊಗ್ಗ ಜಿಲ್ಲೆ ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಅಪರ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಹಾಗೂ ಪದ ನಿಮಿತ್ತ ಅಪರ ನಿಬಂಧಕರು, ಕೈಗಾರಿಕಾ ಸಹಕಾರ ಸಂಘಗಳು ಬೆಂಗಳೂರು ಇವರ ಆದೇಶ ನಂ.ಐಸಿಎಸ್:2:ಎ4:ಸಮಾಪನೆ:62:93, ದಿನಾಂಕ:07.01.94.

2) ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗ ರವರ ಪ್ರಸ್ತಾವೆ ನಂ. ಡಿಆರ್ಎಸ್: ಸಮಾಪನೆ: ಡಿಎಲ್ಎಸ್:473:2005-06 ದಿನಾಂಕ:31.01.2007.

**ಪ್ರಸ್ತಾವನೆ:**

ಭದ್ರಾವತಿ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ. ಭದ್ರಾವತಿ ಶಿವಮೊಗ್ಗ ಜಿಲ್ಲೆ, ಈ ಸಂಘವು ನೋಂದಣಿ ಸಂಖ್ಯೆ: ಎಆರ್ಎಸ್: 1067:53-54 ದಿನಾಂಕ:24.11.1954 ರನ್ವಯ ನೋಂದಣಿಯಾಗಿದ್ದು, ಭದ್ರಾವತಿ ತಾಲ್ಲೂಕಿನ ಕಾರ್ಯವ್ಯಾಪ್ತಿ ಹೊಂದಿರುತ್ತದೆ ಈ ಸಹಕಾರ ಸಂಘ ನೋಂದಣಿಯಾಗಿರುವ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆಯೆಂದು, ವಾರ್ಷಿಕ ಮಹಾಸಭೆ ಹಾಗೂ ಆಡಳಿತ ಮಂಡಳಿ ಸದಸ್ಯರ ಚುನಾವಣೆ ನಡೆಸಿರುವುದಿಲ್ಲ, ಈ ಸಂಘದ ಕಾರ್ಯಚಟುವಟಿಕೆ ಬಗ್ಗೆ ಆಡಳಿತಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ ಯಾವುದೇ ಆಸಕ್ತಿ ಇಲ್ಲದ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ರನ್ವಯ ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಭದ್ರಾವತಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ:22.01.2002 ರಂದು ಪ್ರಭಾರ ವಹಿಸಿಕೊಂಡಿರುತ್ತಾರೆ.

ಪ್ರಭಾರ ವಹಿಸಿಕೊಂಡ ಸಮಾಪನಾಧಿಕಾರಿಯವರು ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇಗೊಳಿಸಲು ಕ್ರಮವಿಟ್ಟಿರುತ್ತಾರೆಂದು, ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುವುದರಿಂದ ಕಲಂ 75ರನ್ವಯ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಉಲ್ಲೇಖ (2)ರ ಪತ್ರದಲ್ಲಿ ಉಪ ನಿಬಂಧಕರು, ಶಿವಮೊಗ್ಗರವರು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಸದರೀ ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಸರ್ಕಾರದ ವಿನಿಯೋಗಗಳು ಯಾವುದೂ ಇರುವುದಿಲ್ಲ. ವಸೂಲಾತಿಗೆ ಸಾಧ್ಯವಾಗದ ಇತರೆ ಆಸ್ತಿ- ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಅಡಾವೆ ಪತ್ರಿಕೆ ತಯಾರಿಸಿರುತ್ತಾರೆ ಮತ್ತು ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಹಾಗೂ ದಿನಾಂಕ:16.06.2005 ರಂದು ಸಮಾಪನಾಧಿಕಾರಿಯವರು ಠರಾವು ಪಾಸು ಮಾಡಿದ್ದು ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಇವರ ನಿಲುವನ್ನು ಪುಷ್ಟೀಕರಿಸಿರುವ ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗ ಜಿಲ್ಲೆ ಇವರು ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಂಡಿದ್ದು, ಸರ್ಕಾರದ ವಿನಿಯೋಗಗಳೇನು ಇಲ್ಲದ ಪ್ರಯುಕ್ತ ನೋಂದಣಿ ಸಂಖ್ಯೆ ರದ್ದು ಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಅಡಾವೆ ಪತ್ರಿಕೆ ಶೂನ್ಯವಾಗಿರುವ ಪ್ರಯುಕ್ತ ಹಾಗೂ ಸರ್ಕಾರದ ವಿನಿಯೋಗಗಳು, ಸ್ಥಿರಾಸ್ತಿಗಳು ಯಾವುದೂ ಇಲ್ಲದ ಪ್ರಯುಕ್ತ ಸಂಘವನ್ನು ಸಮಾಪನಾವಸ್ಥೆಯಲ್ಲಿಯೇ ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲದಿರುವುದನ್ನು

ಮನಗಂಡು ಸಹಕಾರ ಸಂಘಗಳ ಉಪನಿಬಂಧಕರು ಶಿವಮೊಗ್ಗ ಜಿಲ್ಲೆ ಇವರ ಶಿಫಾರಸ್ಸಿನನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದೇ ಸೂಕ್ತವೆಂದು ಪರಿಗಣಿಸಲಾಗಿದ್ದು, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಕೆ. ಯಧುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಬೆಂಗಳೂರು, ಆದ ನಾನು, ಭದ್ರಾವತಿ ತಾಲ್ಲೂಕು ಕೈಗಾರಿಕಾ ಸಹಕಾರ ಸಂಘ ನಿ. ಭದ್ರಾವತಿ ಶಿವಮೊಗ್ಗ ಜಿಲ್ಲೆ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್ಎಸ್:1067:53–54 ದಿನಾಂಕ:24.11.1954 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 03 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂದಕರು, ಶಿವಮೊಗ್ಗ ಉಪವಿಭಾಗ ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2008ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು**

**ನಂ.ಜೆ.ಆರ್.ಬಿ.ಎಲ್.ಕ್ಯೂ.ಡಿ/58/2: ಎಲ್.ಎಂ.ಸಿ.:2007–08, ದಿನಾಂಕ:4ನೇ ಏಪ್ರಿಲ್, 2008**

**ವಿಷಯ:** ತುಂಗಾ ಮೀನುಗಾರರ ಸಹಕಾರ ಸಂಘ ನಿ. ನೆಲ್ಲಿಸರ ತೀರ್ಥಹಳ್ಳಿ ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**1) ಸಹಕಾರ ಸಂಘಗಳ ಉಪ ನಿಬಂಧಕರು ಶಿವಮೊಗ್ಗರವರ ಪ್ರಸ್ತಾವೆ ನಂ. ಡಿಆರ್ಎಸ್: ಸಮಾಪನೆ: ಡಿಎಲ್ಎಸ್:67:2006–07, ದಿನಾಂಕ:25.11.2006.

2) ಈ ಕಛೇರಿ ಪತ್ರ ನಂ.ಜೆಆರ್ಎಲ್ಕ್ಯೂಡಿ58: ಎಲ್ಎಂಸಿ:2006–07 ದಿನಾಂಕ:03.12.2007.

**ಪ್ರಸ್ತಾವನೆ:**

ತುಂಗಾ ಮೀನುಗಾರರ ಸಹಕಾರ ಸಂಘ ನಿ. ನೆಲ್ಲಿಸರ ತೀರ್ಥಹಳ್ಳಿ ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ: ಡಿಆರ್ಎಸ್: ನೋಂದಣಿ:32499: 2004–05, ದಿನಾಂಕ:22.12.2004ರನ್ವಯ ನೋಂದಣಿಯಾಗಿದ್ದು, ತೀರ್ಥಹಳ್ಳಿ ತಾಲ್ಲೂಕಿನ ಕಾರ್ಯವ್ಯಾಪ್ತಿ ಹೊಂದಿರುತ್ತದೆ. ಈ ಸಹಕಾರ ಸಂಘ ನೋಂದಣಿಯಾಗಿರುವ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆಯೆಂದು, 2004–05ನೇ ಸಾಲಿನಿಂದ ವಾರ್ಷಿಕ ಮಹಾಸಭೆ ಹಾಗೂ ಆಡಳಿತ ಮಂಡಳಿ ಸದಸ್ಯರ ಚುನಾವಣೆ ನಡೆಸಿರುವುದಿಲ್ಲ, ಈ ಸಂಘದ ಕಾರ್ಯಚಟುವಟಿಕೆ ಬಗ್ಗೆ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಂಘದ ಸದಸ್ಯರಿಗಾಗಲೀ, ಯಾವುದೇ ಆಸಕ್ತಿ ಇಲ್ಲದ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಬೇಕೆಂದು ಉಲ್ಲೇಖ (1) ರ ಪತ್ರದಲ್ಲಿ ಉಪನಿಬಂಧಕರು, ಶಿವಮೊಗ್ಗರವರು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ. ಸದರೀ ಪ್ರಸ್ತಾವೆಯಲ್ಲಿನ ಆರೋಪಗಳಿಗೆ ಸಂಘದ ಆಡಳಿತ ಮಂಡಳಿ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಉಲ್ಲೇಖ (2)ರ ನೋಟೀಸನ್ನು ನೀಡಿದ್ದು, 15 ದಿನಗಳೊಳಗಾಗಿ ಉತ್ತರ ನೀಡಲು ನೋಟೀಸಿನಲ್ಲಿ ತಿಳಿಸಿ, ನೋಟೀಸನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಮೂಲಕ ಜಾರಿ ಮಾಡಲಾಗಿದೆ.

ಸದರೀ ನೋಟೀಸನ್ನು ಸ್ವೀಕರಿಸಿದ್ದರೂ, ಆಡಳಿತ ಮಂಡಳಿ ಸದಸ್ಯರಾರೂ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಸದರೀ ವಿಷಯದಲ್ಲಿ ಅವರ ಆಕ್ಷೇಪಣೆಗಳು ಏನೂ ಇಲ್ಲವೆಂದು ಭಾವಿಸಿರುತ್ತದೆ, ಹಾಗೂ ನೋಟೀಸಿನಲ್ಲಿ ತಿಳಿಸಿರುವ ನ್ಯೂನತೆಗಳು ಆರೋಪಗಳು ನಿಜವೆಂದು ಒಪ್ಪಿ ಸಮಾಪನೆಗೊಳಿಸಲು ಆಕ್ಷೇಪಣೆ ಇರುವುದಿಲ್ಲವೆಂದು ಒಪ್ಪಿಗೆ ಇರುವುದರಿಂದ ಹಾಗೂ ಮೇಲ್ಕಂಡ ಸಂದರ್ಭಗಳಲ್ಲಿ ತಿಳಿಸಿರುವ ಕಾರಣಗಳ ಪ್ರಕಾರ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಕೆ. ಯಧುನಾಥ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ ಬೆಂಗಳೂರು, ಆದ ನಾನು, ತುಂಗಾ ಮೀನುಗಾರರ ಸಹಕಾರ ಸಂಘ ನಿಯಮಿತ ನೆಲ್ಲಿಸರ ತೀರ್ಥಹಳ್ಳಿ ತಾಲ್ಲೂಕು, ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ

ಬರುವಂತೆ ಸಮಾಪನೆಗೊಳಿಸಿ, ಕಲಂ 73ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ತೀರ್ಥಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು ಸಂಘದ ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವೆಯನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ ಹಸ್ತಾಕ್ಷರ ಹಾಗೂ ಕಛೇರಿ ಮೊಹರಿನೊಂದಿಗೆ ಈ ದಿನ ದಿನಾಂಕ 4ನೇ ಏಪ್ರಿಲ್, 2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.812

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.ಎಸ್‌ಡಿಕೆ/2/ಡಿಟಿಸಿಆರ್/2007–08, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ | 1) ಕೆ. ರಾಜೇಶ್ ಬಿನ್ ಕೃಷ್ಣಪ್ಪ ಕೋಟ್ಯಾನ್, ಕೃಷ್ಣಪ್ರಸಾದ್ ನಿಲಯ, ಕೊರಂಗ್ರಪಾಡಿ, ಕೆಮ್ಮೂರು ಗ್ರಾಮ, ಉಡುಪಿ ತಾಲ್ಲೂಕು.<br>2) ರಾಹುಲ್ ಶೆಟ್ಟಿ ಬಿನ್ ಸದಾಶಿವ ಶೆಟ್ಟಿ, ಕರಂಗಲಪಾಡಿ, 1ನೇ ಕ್ರಾಸ್, ಬಂಟ್ಸ್ ಹಾಸ್ಟೆಲ್, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (1) ಜ್ಯಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಮತ್ತು ಗುಪ್ತ ವಾರ್ತಾದಳದ ಅಬಕಾರಿ ಉಪ ನಿರೀಕ್ಷಕರು ಹಾಗೂ ಸಿಬ್ಬಂದಿಯವರೊಂದಿಗೆ ಜಂಟಿಯಾಗಿ ದಿನಾಂಕ:01.07.2007 ರಂದು ಮಂಗಳೂರು ತಾಲ್ಲೂಕಿನ ಮಂಗಳೂರು ನಗರದ ಪಂಪ್‌ವೆಲ್ ಎಂಬಲ್ಲಿರುವ ಹೋಟೆಲ್ ಪೆಂಟಗಾನ್‌ಗೆ ಹೋಗುವ ಮುಖ್ಯದ್ವಾರದ ಬಳಿ ಮಂಗಳೂರಿನಿಂದ ಕೇರಳ ಕಡೆಗೆ ಹೋಗುತ್ತಿದ್ದ ವಾಹನಗಳನ್ನು ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ಪಂಪ್‌ವೆಲ್ ಕಡೆಯಿಂದ ಬರುತ್ತಿದ್ದ ಕಾರನ್ನು ತಪಾಸಣೆ ಮಾಡುವ ಸಲುವಾಗಿ ನಿಲ್ಲಿಸಲು ಸೂಚಿಸಿದಾಗ ಕಾರನ್ನು ಚಲಾಯಿಸುತ್ತಿದ್ದ ವ್ಯಕ್ತಿಯು ಕಾರನ್ನು ನಿಲ್ಲಿಸದೇ ಮುಂದಕ್ಕೆ ಚಲಾಯಿಸಿಕೊಂಡು ಹೋದಾಗ ಸಂಶಯದ ಮೇರೆಗೆ ಬೆನ್ನಟ್ಟಿ ಸದ್ರಿ ಕಾರನ್ನು ನಂತೂರು ಸೇತುವೆ ಬಳಿ ತಡೆದು ನಿಲ್ಲಿಸಿ ಪರಿಶೀಲನೆ ಮಾಡಿದಾಗ, ಕಾರಿನ ಮಧ್ಯ ಸೀಟಿನ ಹಾಗೂ ಡಿಕ್ಕಿಯಲ್ಲಿ ಸಾರಾಯಿ ಸ್ಯಾಚೇಟುಗಳು ತುಂಬಿದ್ದ ನೈಲಾನ್ ಚೀಲದ ಕಟ್ಟುಗಳು ಇದ್ದು, ಸದ್ರಿ ಕಾರನ್ನು ಶೋಧನೆ ನಡೆಸಿ, ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 54ರ ಪ್ರಕಾರ ಶೋಧನೆ ನಡೆಸಲು ಸ್ಥಳೀಯ ಸಾಕ್ಷಿದಾರರನ್ನು ಪಡೆಯಲು ಪ್ರಯತ್ನಿಸಲಾಗಿದ್ದು, ತಡರಾತ್ರಿಯಾಗಿರುವುದರಿಂದ ಸಾಕ್ಷಿದಾರರು ಯಾರು ಸಿಗದ ಕಾರಣ ಇಲಾಖೆಯವರನ್ನೇ ಸಾಕ್ಷಿಯಾಗಿಟ್ಟುಕೊಂಡು ಸದ್ರಿ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಸದ್ರಿ ಕಾರು ಮಾರುತಿ ಕಂಪೆನಿಯ ಬೂದು ಬಣ್ಣದ ಎಸ್ಟೀಮ್ ಕಾರು ಆಗಿದ್ದು ಇದರ ನೋಂದಣಿ ಸಂಖ್ಯೆ: ಕೆಎ:19:ಎಂ:4239 ಆಗಿರುತ್ತದೆ. ಇದರ ಇಂಜಿನ್ ನಂಬರ್:G13BIN620543GX ಚಾಸಿಸ್ ನಂಬರ್:MA3EBE41500252579 ಕಂಡುಬಂತು, ನಂತರ ಕಾರಿನಲ್ಲಿದ್ದ ಸಾರಾಯಿ ಸ್ಯಾಚೇಟುಗಳನ್ನು ಪರಿಶೀಲಿಸಿದಾಗ 100 ಮಿಲಿಯ ತಲಾ 500 ಸಾರಾಯಿ ಸ್ಯಾಚೆಟ್‌ಗಳನ್ನು ತುಂಬಿದ ಒಟ್ಟು 16 ಪಾಲಿಥಿನ್ ಚೀಲಗಳಲ್ಲಿ 8000 ಸಾರಾಯಿ ಸ್ಯಾಚೆಟ್‌ಗಳು ಒಟ್ಟು 800.00 ಲೀಟರ್ ಸಾರಾಯಿ ಹಾಗೂ ಕಾರಿನ ಒಳಗಡೆ ನೋಕಿಯೋ ಕಂಪೆನಿಯ ಎರಡು ಮೊಬೈಲ್ ಸೆಟ್ಟುಗಳು ಇರುವುದು ಕಂಡುಬಂತು. ನಂತರ ಕಾರು ಚಲಾಯಿಸುತ್ತಿದ್ದ ವ್ಯಕ್ತಿಯ ಹೆಸರು ಕೆ.ರಾಜೇಶ್ ಬಿನ್ ಕೃಷ್ಣಪ್ಪ ಕೋಟ್ಯಾನ್, ಕೆಮ್ಮೂರು ಗ್ರಾಮ, ಉಡುಪಿ ತಾಲ್ಲೂಕು ಮತ್ತು ಸಹಾಯಕನಾದ ರಾಹಲ್ ಶೆಟ್ಟಿ ಬಿನ್ ಸದಾಶಿವ ಶೆಟ್ಟಿ, ಫೆರ್ನ್ಸ್ ವಿಲ್ಲಾ, ಕರಂಗಲಪಾಡಿ, 1ನೇ ಕ್ರಾಸ್, ಬಂಟ್ಸ್ ಹಾಸ್ಟೆಲ್, ಮಂಗಳೂರು ತಾಲ್ಲೂಕು ಎಂದು ತಿಳಿಸಿದ್ದು, ಸದ್ರಿ ಸಾರಾಯಿ ಸ್ಯಾಚೇಟುಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರಗಳು ಇದೆಯೇ ಎಂದು ಕೇಳಲಾಗಿ ಅದು ಯಾವುದು ಇಲ್ಲವೆಂದು, ಸಾರಾಯಿ ಸ್ಯಾಚೇಟುಗಳನ್ನು ಮಂಗಳೂರು ತಾಲ್ಲೂಕಿನ 2006–07ನೇ ಸಾಲಿನ ಗುತ್ತಿಗೆದಾರರಾದ ರಾಜ್ ಪ್ರಕಾಶ ಎಂಬವರ ಕೂಳೂರು ಪೇಟೆಯ ಶರಾಬು ಅಂಗಡಿಯ ಕಟ್ಟಡದ ಹಿಂಬದಿಯಿಂದ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದೆಂದು ತಿಳಿಸಿರುವ ಮೇರೆಗೆ ಇದು ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರಿಂದ ಮಹಜರನ್ನು ಸ್ಥಳದಲ್ಲಿಯೇ ತಯಾರಿಸಿ ಪಂಚರ ಸಮಕ್ಷಮ ಸಾರಾಯಿ ಸ್ಯಾಚೇಟುಗಳನ್ನು ಎರಡು ನೋಕಿಯೋ

ಮೊಬೈಲ್‌ಸೆಲ್‌ಗಳನ್ನು ಮತ್ತು ಸಾಗಾಣಿಕೆಗೆ ಬಳಸಿದ ಮಾರುತಿ ಎಸ್ಟೀಮ್ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 1/2007–08, ದಿನಾಂಕ:01.07.2007ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು, ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಸೊತ್ತುಗಳನ್ನು ಮುಂದಿನ ತನಿಖೆ ಮುಗಿಯುವವರೆಗೆ ತಮ್ಮ ವಶದಲ್ಲಿಯೇ ಇಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ಅನುಮತಿಯನ್ನು ಪಡೆದಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ, ಮಂಗಳೂರು ಇವರು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿಯಿಂದ 100 ಎಂಎಲ್‌ನ 32 ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಸಾರಾಯಿ ಸ್ಯಾಚೇಟುಗಳ ಮಾದರಿಗಳನ್ನು ವಿಶ್ಲೇಷಿಸಿದ ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರ ಪತ್ರ ಸಂಖ್ಯೆ: ಇ137–16: ದಿನಾಂಕ:11.07.2007ರ ವರದಿಯಲ್ಲಿ ಸಾರಾಯಿಯ ಮದ್ಯಸಾರದ ಪ್ರಮಾಣ 36% ವಿ.ವಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ಸಾರಾಯಿ ಮತ್ತು ನೋಕಿಯೋ ಕಂಪನಿಯ ಮೊಬೈಲ್ ಸೆಟ್ಸ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಸಾರಾಯಿಯನ್ನು ನಾಶಪಡಿಸಲು ಆದೇಶ ನೀಡಬೇಕೆಂದು ದಿನಾಂಕ:17.08.2007ರ ತನಿಖಾ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ಡಿಟಿಸಿಆರ್/2/2007–08 ದಿನಾಂಕ:16.10.2007ರಲ್ಲಿ ಜಪ್ತು ಪಡಿಸಿಕೊಂಡಿರುವ 100 ಎಂಎಲ್‌ನ 8000 ಸಾರಾಯಿ ಸ್ಯಾಚೇಟುಗಳನ್ನು (ಮಾದರಿಗಳನ್ನು ಹೊರತುಪಡಿಸಿ) ಮತ್ತು ಮೊಬೈಲ್ ಫೋನ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸಾರಾಯಿಯನ್ನು ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:06:ಪಿಐಎಸ್:2007 ದಿನಾಂಕ:13.07.2007 ರನ್ವಯ ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪವಿಭಾಗ, ಮಂಗಳೂರು ಇವರ ಸಮಕ್ಷಮ ಮಹಜರು ಜರುಗಿಸಿ ದಿನಾಂಕ:16.11.2007ರಂದು ನಾಶಪಡಿಸಿ ವರದಿ ಮಾಡಿರುತ್ತಾರೆ.

ಸಹಾಯಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸಲ್ಲಿಸಿದ್ದ ದಿನಾಂಕ:11.07.2007ರ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಶಪಡಿಸಿಕೊಂಡ ವಾಹನದ ನೋಂದಣಿ ಸಂಖ್ಯೆ: ಕೆಎ–19ಎಂ–4239 ವಾಹನವು ಮಹೀಂದ್ರ ಜೀಪು ಆಗಿದ್ದು ಇದರ ಚಾಸೀಸ್ ಸಂ: DS42568 ಮತ್ತು ಇಂಜಿನ್ ಸಂ: DS42568 ಎಂದು ದೃಢೀಕರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ: ದಿನಾಂಕ:17.08.2007ರ ವರದಿಯಲ್ಲಿ ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಎಸ್ಟೀಮ್ ಕಾರಿಗೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಆರೋಪಿಗಳು ಅಕ್ರಮವಾಗಿ ಸಾಗಾಣಿಕೆ ಮಾಡಿರುವುದು ಖಚಿತವಾಗಿರುವುದರಿಂದ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಎಸ್ಟೀಮ್ ನಕಲಿ ಸಂಖ್ಯೆ: ಕೆಎ–19ಎಂ–4239 ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಸದ್ರಿ ಮೊಕದ್ದಮೆಗೆ ಸಂಬಂಧಿಸಿ ದಸ್ತಗಿರಿ ಮಾಡಿದ ಆರೋಪಿಗಳಿಗೆ ಈ ಪ್ರಾಧಿಕಾರದ ದಿನಾಂಕ:20.08.2007ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟೀಸ್‌ಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸಿನಲ್ಲಿ ಜಪ್ತಾದ ವಾಹನ ಸಂಖ್ಯೆ: ಕೆಎ–19ಎಂ–4239 ಮಹೀಂದ್ರ ಜೀಪು ಆಗಿದ್ದು, ಇದಕ್ಕೆ ನಕಲಿ ನಂಬರ್ ಅಳವಡಿಸಿ ಅಕ್ರಮ ಸಾರಾಯಿ ಸಾಗಾಣಿಕೆ ಬಳಸಿರುವುದು ಹಾಗೂ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಂತೆ ವಶಪಡಿಸಿಕೊಂಡ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಈ ನೋಟಿಸು ತಲುಪಿದ 15 ದಿವಸದೊಳಗೆ ಈ ಪ್ರಾಧಿಕಾರಕ್ಕೆ ವಿವರಣೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಆದರೆ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ನೀಡಿದ ಕಾರಣ ಕೇಳುವ ನೋಟಿಸು ಅಂಚೆ ಮೂಲಕ ಜಾರಿಯಾಗದೇ ಅಂಚೆ ಕಛೇರಿಯ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಇವರು ದಿನಾಂಕ:01.07.2007ರಂದು ದಾಖಲಿಸಿರುವ ಮೊಕದ್ದಮೆಯಂತೆ ಆರೋಪಿಗಳು ಯಾವುದೇ ಅಧಿಕೃತ ರಹದಾರಿ ಪತ್ರ ಇಲ್ಲದೇ ಅಕ್ರಮವಾಗಿ 100 ಎಂಎಲ್‌ನ 8000 ಸಾರಾಯಿ ಸ್ಯಾಚೇಟುಗಳನ್ನು ಮಾರುತಿ ಎಸ್ಟೀಮ್ ಕಾರು ನಕಲಿ ನೊಂದಣಿ ಸಂಖ್ಯೆ: ಕೆಎ–19ಎಂ:4239 ರ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿ ಆರೋಪಿಗಳು ಸಾಗಾಣಿಕೆ ಮಾಡುತ್ತಿರುವುದು ಖಚಿತವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಇಂಜಿನ್ ನಂಬರು ಮತ್ತು ಚಾಸೀಸ್ ನಂಬರ್ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಶಪಡಿಸಿಕೊಂಡ ವಾಹನದ ನಂಬರಿಗೆ ಒಂದಕ್ಕೊಂದು ತಾಳೆಯಾಗಿರುವುದಿಲ್ಲ ಹಾಗೂ ಇದೇ ನೊಂದಣಿ ಸಂಖ್ಯೆ: ಕೆಎ–19ಎಂ–4239 ವಾಹನ ಮಹೀಂದ್ರ ಜೀಪು ಎಂಬುದಾಗಿ ದೃಢೀಕರಿಸಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:01.07.2007ರಂದು ಮಾರುತಿ ಎಸ್ಟೀಮ್ ಕಾರು ಸಂಖ್ಯೆ: ಕೆಎ–19ಎಂ–4239 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ನಕಲಿ ನಂಬರ್ ಪ್ಲೇಟ್ ಅಳವಡಿಸಿ ಆರೋಪಿಗಳು 100 ಎಂಎಲ್‌ನ 8000 ಸಾರಾಯಿ ಸ್ಯಾಚೇಟುಗಳನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣರವರು ಪತ್ತೆಹಚ್ಚಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಹಾಗೂ ಸಾರಾಯಿ ಸ್ಯಾಚೇಟುಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯಾಗಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಇವರು ವಶಪಡಿಸಿಕೊಂಡ ಮಾರುತಿ ಎಸ್ಟೀಮ್ ಕಾರು ನಕಲಿ ನೊಂದಣಿ ಸಂಖ್ಯೆ: ಕೆಎ–19–ಎಂ–4239 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷಕ್ಕಿಂತ ಹೆಚ್ಚು ಸಮಯ ಕಳೆದಿದ್ದರೂ, ವಾಹನ ಮಾಲೀಕರು ಸೂಕ್ತ ದಾಖಲಾತಿಗಳೊಂದಿಗೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಸಾರಾಯಿ ಸಾಗಾಣಿಕೆಯಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಯಾವುದೇ ಅರ್ಜಿ ಅಥವಾ ವಕೀಲರ ಮುಖಾಂತರ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಮತ್ತು ಆರೋಪಿಗಳು ಸದ್ರಿ ವಾಹನಕ್ಕೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಅಕ್ರಮ ಸಾರಾಯಿಯನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಆರೋಪಿಗಳು ಸಾರಾಯಿಯನ್ನು ಮಾರಾಟ ಮಾಡಲೆಂಬ ಉದ್ದೇಶದಿಂದ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹಾಗೂ ಆರೋಪಿಗಳನ್ನು ಪತ್ತೆ ಹಚ್ಚಲು ಕಷ್ಟಸಾಧ್ಯವಾಗಿರುವುದರಿಂದ ಹಾಗೂ ವಶಪಡಿಸಿಕೊಂಡ ಮಾರುತಿ ಎಸ್ಟೀಮ್ ಕಾರು ಒಂದು ವರ್ಷ ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ತಿಳಿಸಿ ಈ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ, ಸದ್ರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ವಾಹನದ ಸ್ಥಿತಿ ಹಾಳಾಗುವ ಸಾಧ್ಯತೆ ಇರುವ ಕಾರಣ, ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಮಾರುತಿ ಎಸ್ಟೀಮ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ ಮಂಗಳೂರು ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 1/2007–08, ದಿನಾಂಕ:01.07.2007ರಲ್ಲಿ ಜಪ್ತುಪಡಿಸಿರುವ ಮಾರುತಿ ಎಸ್ಟೀಮ್ ಕಾರು ನಕಲಿ ನೊಂದಣಿ ಸಂಖ್ಯೆ: ಕೆಎ–19ಎಂ–4239 (ಇಂಜಿನ್ ನಂಬರ್: G13BIN620543GX ಚಾಸಿಸ್ ನಂಬರ್:MA3EBE41500252579)ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮದ್ ಹುಸೇನ್**

ಪಿ.ಆರ್.924

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ಕಛೇರಿ

**ವಿಷಯ:** ಸಮಾಪನೆಯಲ್ಲಿರುವ ಹಿರಿಯೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಹಿರಿಯೂರು ತಾ: ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ನಂ.ಜೆಆರ್‌ಬಿ:ಸಮಾಪನೆ:13:1997-98 ದಿನಾಂಕ:07.08.1998.

2) ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಪತ್ರ ನಂ.ಡಿಆರ್‌ಡಿ ಚಿತ್ರದುರ್ಗ: ಸಣ್ಣ:ಅತಿ: ಸಿಆರ್:62:05-06, ದಿನಾಂಕ:10.10.2005.

ಹಿರಿಯೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಹಿರಿಯೂರು ಈ ಸಹಕಾರ ಸಂಘವು ನೊಂದಣಿ ಸಂಖ್ಯೆ: ಡಿಆರ್‌ಡಿ: 467: ಆರ್‌ಸಿಎಸ್:81-82 ದಿನಾಂಕ:06.08.1987 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಸಾಮೂಹಿಕ ಬೇಸಾಯಕ್ಕೆ ಸಂಬಂಧಿಸಿದಂತೆ ಸಂಘದ ವ್ಯಾಪ್ತಿಯಲ್ಲಿ ಬರುವ ಸದಸ್ಯರ ರೈತರ ಜಮೀನುಗಳಲ್ಲಿ ಕೊರೆಸಿದ ಕೊಳವೆಬಾವಿ ಹಾಗೂ ಪಂಪ್‌ಸೆಟ್ ಮೋಟಾರ್‌ಗಳನ್ನು ಬರಗಾಲ ಪೀಡಿತ ಅಭಿವೃದ್ಧಿ ಯೋಜನಾವತಿಯಿಂದ ಅನುದಾನ ರೂಪದಲ್ಲಿ ಅನುದಾನ ನೀಡಲಾಗಿರುತ್ತದೆ. ಕಾಲಕ್ರಮೇಣ ಜಿಲ್ಲೆಯಲ್ಲಿ ಮಳೆ ಕಡಿಮೆಯಾಗಿ ಅಂತರ್‌ಜಲ ಕೊರತೆಯಿಂದಾಗಿ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದರಿಂದ ಮೇಲ್ಕಂಡ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಂಘದ ತೀರಿಸತಕ್ಕ ಜವಾಬ್ದಾರಿಗಳು, ತೀರಿಸಲಾಗದ ಸ್ಥಿತಿಗೆ ಬಂದಿದ್ದು, ಸಮಾಪನಾಧಿಕಾರಿಗಳು ಸಂಘದ ಪುನಃಶ್ಚೇತನಕ್ಕೆ ಪ್ರಯತ್ನಿಸಿದ್ದು, ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ:25.09.2005 ರಂದು ನಡೆಸಿದ ಸಮಾಪನಾಧಿಕಾರಿಯವರ ಸಭಾ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮೂಲಕ ಶೂನ್ಯಗೊಳಿಸಲಾಗಿದೆ ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸಿದಲ್ಲಿ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಇವರು ಸದರಿ ಸಂಘವನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪನಿಬಂಧಕರ ವರದಿಯ ಮೇರೆಗೆ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದೇ ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ: ಜೆಆರ್‌ಬಿ: ಸಮಾಪನೆ:13:08-09, ದಿನಾಂಕ:24ನೇ ಮಾರ್ಚ್, 2009**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001ರಲ್ಲಿ ದತ್ತವಾದ ಅಧಿಕಾರದನ್ವಯ ಸಿ.ಎಸ್.ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಹಿರಿಯೂರು ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಹಿರಿಯೂರು ತಾ: ಈ ಸಂಘದ ನೊಂದಣಿ ಸಂಖ್ಯೆ: ಡಿಆರ್‌ಡಿ:467:ಆರ್‌ಸಿಎಸ್:81-82 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ಧುಗೊಳಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಕಾರ್ಪೋರೇಟ್ ಬಾಡಿಯಾಗಿರುವ ಅಸ್ಥಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:24.03.2009ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.330

### ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ

**ನಂ.ಎಸ್‌ಡಿಕೆ/181/ಡಿಟಿಸಿಆರ್/2006-07, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| ಫಿರ್ಯಾದುದಾರರು: | ಆರೋಪಿಗಳು: |
|---|---|
| ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರು. | 1) ಸಿ.ಆರ್. ಸುಮೋದ್, ಬಿನ್ ರಾಘವನ್ ಪೆಲಕಟ್ಟಿ ಮನೆ, ನೀಲೂರು ಅಂಚೆ, ಕಡನಾಡು ಪಂಚಾಯತ್, ಮೀನಚಿಲ್ ತಾಲ್ಲೂಕು.<br>2) ಸುನಿಲ್ ಕೆ.ವಿ., ಬಿನ್ ವಿಜಯನ್, ಕಾವತಿಯಾಮ್, ಕುನೀಲ್ ಮನೆ, ನೀಲೂರು ಅಂಚೆ, ಕಡನಾಡು ಪಂಚಾಯತ್, ಮೀನಚಿಲ್ ತಾಲ್ಲೂಕು, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರುರವರು ತಮ್ಮ ಸಿಬ್ಬಂದಿಗಳೊಂದಿಗೆ ದಿನಾಂಕ:21.11.2006ರಂದು ಬೆಳಿಗ್ಗೆ 8.30 ಗಂಟೆ ಸಮಯದಲ್ಲಿ ಉಡುಪಿ ಕಡೆಯಿಂದ ಮಂಗಳೂರು ಮುಖಾಂತರ ಕೇರಳ ರಾಜ್ಯಕ್ಕೆ ಲಾರಿಯಲ್ಲಿ ಅಕ್ರಮ ಸ್ಪಿರಿಟ್ ಸಾಗಾಟವಾಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಮಂಗಳೂರಿನ ಪಂಪ್‌ವೆಲ್ ಎಂಬಲ್ಲಿ ವಾಹನಗಳನ್ನು ತಪಾಸಣೆ ಮಡುತ್ತಿದ್ದಾಗ ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಉಡುಪಿ ಕಡೆಯಿಂದ ಕೇರಳ ಕಡೆಗೆ ಬರುತ್ತಿದ್ದ ಲಾರಿ ಸಂಖ್ಯೆ: ಟಿಎನ್–27ಎಲ್–4369ನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಲಾರಿಯನ್ನು ಬದಿಗೆ ನಿಲ್ಲಿಸಿ, ಸದ್ರಿ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ಹಿಂದಿನ ಬಾಡಿಯಲ್ಲಿ 35 ಲೀಟರ್ ಗಾತ್ರದ 280 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 9800.000 ಲೀಟರ್ ಮದ್ಯಸಾರವನ್ನು ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 13(i)(a)(f) ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34 ಮತ್ತು 43 (i)( ii) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ವಾಹನದ ಚಾಲಕನ ಹಾಗೂ ಕ್ಲೀನರ್‌ನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಚಾಲಕನು ಸಿ.ಆರ್. ಸುಮೋದ್, ಬಿನ್ ರಾಘವನ್, ಪೆಲಕಟ್ಟಿ ಮನೆ, ನೀಲೂರು ಅಂಚೆ, ಕಡನಾಡು ಪಂಚಾಯತ್, ಮೀನಚಿಲ್ ತಾಲ್ಲೂಕು, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಮತ್ತು ಕ್ಲೀನರ್ ಸುನಿಲ್ ಕೆ.ವಿ., ಬಿನ್ ವಿಜಯನ್, ಕಾವತಿಯಾಮ್, ಕುನೀಲ್ ಮನೆ, ನೀಲೂರು ಅಂಚೆ, ಕಡನಾಡು ಪಂಚಾಯತ್, ಮೀನಚಿಲ್ ತಾಲ್ಲೂಕು, ಕೊಟ್ಟಾಯಂ ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿದ್ದು, ಇವರುಗಳು ಅಕ್ರಮ ಮದ್ಯಸಾರ ಸಾಗಾಣಿಕೆ ಮಾಡುತ್ತಿರುವ ಕಾರಣಕ್ಕೆ ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮಹಜರು ಹಾಗೂ ಪಂಚರ ಸಮಕ್ಷಮ ಸಾಗಾಣಿಕೆಗೆ ಬಳಸಿದ ಲಾರಿ ಸಂಖ್ಯೆ: ಟಿಎನ್–27–ಎಲ್–4369 ಹಾಗೂ ಮದ್ಯಸಾರವನ್ನು ಜಫ್ತು ಮಾಡಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 319/2006, ದಿನಾಂಕ:21.11.2006ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ನಕಲನ್ನು ಸೊತ್ತು ಪಟ್ಟಿಯೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ವಾಹನವನ್ನು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಇವರಿಗೆ ಈ ಪ್ರಾಧಿಕಾರದ ಅನುಮತಿ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖಾಧಿಕಾರಿಗಳು ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ ತೆಗೆದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ ಮುಖ್ಯ ರಾಸಾಯನಿಕ ವಿಶ್ಲೇಷಕರು, ಬೆಂಗಳೂರುರವರು ದಿನಾಂಕ:05.03.2007ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯಸಾರದ ಪ್ರಮಾಣ 62.1 ರಿಂದ 64.1 ಡಿಗ್ರಿ ಒ.ಪಿ ಮತ್ತು 63.0 ರಿಂದ 64.1 ಡಿಗ್ರಿ ಒ.ಪಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತು ಪಡಿಸಿಕೊಂಡ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿನಾಂಕ:13.03.2007ರಂದು ನೀಡಿದ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ಡಿಟಿಸಿಆರ್/181/2006–07 ದಿನಾಂಕ:14.03.2007ರಲ್ಲಿ ಜಪ್ತು ಪಡಿಸಿಕೊಂಡಿರುವ 9800 ಲೀ ಮದ್ಯಸಾರವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಟಿಎನ್–27ಎಲ್–4369ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ರಿಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ಸೇಲಂ, ತಮಿಳುನಾಡು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:16.01.2007ರಂದು ಪತ್ರ ಬರೆಯಲಾಗಿದ್ದು, ಸದ್ರಿ ಪತ್ರವು ದಿನಾಂಕ:22.01.2007 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಪತ್ರ ಈ ಕಛೇರಿಗೆ ಬಂದಿರುತ್ತದೆ. ತದನಂತರದಲ್ಲಿ ಸಾರಿಗೆ ಅಧಿಕಾರಿಯವರಿಗೆ ದಿನಾಂಕ:21.04.2007 ಮತ್ತು 17.09.2007ರಂದು ನೆನಪೋಲೆ ಪತ್ರ ಬರೆಯಲಾಗಿದ್ದು, ಅವರು ದಿನಾಂಕ:10.12.2007ರ ಪತ್ರದಲ್ಲಿ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಅವರು ಸಲ್ಲಿಸಿದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಶಪಡಿಸಿಕೊಂಡ ವಾಹನ ಲಾರಿ ಸಂಖ್ಯೆ: ಟಿಎನ್–27–ಎಲ್–4369 ವಾಹನದ ನೊಂದಣಿ ಸಂಖ್ಯೆಯು ಬಜಾಜ್ ಎಂ–80 ದ್ವಿಚಕ್ರ ವಾಹನವಾಗಿದ್ದು, ಇದರ ಚಾಸೀಸ್ ನಂ.16CBEM60606 ಮತ್ತು ಇಂಜಿನ್ ನಂ. 16EBEM 68799 ಎಂದು ದೃಢೀಕರಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರು ಇವರು ದಿನಾಂಕ:21.11.2006ರಂದು ಯಾವುದೇ ಅಧಿಕೃತ ರಹದಾರಿ ಪತ್ರ ಇಲ್ಲದೇ ಅಕ್ರಮವಾಗಿ 9,800.000 ಲೀ ಮದ್ಯಸಾರವನ್ನು ಲಾರಿ ಸಂಖ್ಯೆ: ಟಿಎನ್–27ಎಲ್–4369 ರಲ್ಲಿ ಸಾಗಾಣಿಕೆ ಮಾಡುತ್ತಿರುವುದು ಖಚಿತವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಇಂಜಿನ್ ನಂಬರ್ ಮತ್ತು ಚಾಸೀಸ್ ನಂಬರ್ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಶಪಡಿಸಿಕೊಂಡ ವಾಹನಕ್ಕೆ ಒಂದಕ್ಕೊಂದು ತಾಳೆಯಾಗದಿದ್ದು ಸಾಗಾಣಿಕೆಗೆ ಬಳಸಲಾಗಿರುವ ಲಾರಿ ನಕಲಿ ನೋಂದಣಿ ಸಂಖ್ಯೆ ಹೊಂದಿರುವುದು ಕಂಡುಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:21.11.2006 ರಂದು ಲಾರಿ ಸಂಖ್ಯೆ: ಟಿಎನ್–27ಎಲ್–4369 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ನಕಲಿ ನಂಬರ್ ಪ್ಲೇಟ್ ಅಳವಡಿಸಿ ಆರೋಪಿಗಳು 9,800 ಲೀ ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಮಂಗಳೂರುರವರು ಪತ್ತೆಹಚ್ಚಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವೆಂದು ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ ಮಂಗಳೂರು ಇವರು ವಶಪಡಿಸಿಕೊಂಡ ಲಾರಿ ನಕಲಿ ಸಂಖ್ಯೆ: ಟಿಎನ್–27ಎಲ್–4369 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಎಂಟು ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನ ಚಾಲಕನು ಸದ್ರಿ ವಾಹನಕ್ಕೆ ನಕಲಿ ನಂಬರ್ ಪ್ಲೇಟು ಅಳವಡಿಸಿ ಮದ್ಯಸಾರವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ವಾಹನದ ಸ್ಥಿತಿ ಹಾಳಾಗುವ ಸಂದರ್ಭವಿರುವುದರಿಂದ, ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ನಕಲಿ ನೊಂದಣಿ ಸಂಖ್ಯೆ ಬಳಸಿದ ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ

**ಆದೇಶ**

ನೂರ್ ಮಹ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣಾ, ಮಂಗಳೂರು ಇವರ ಕ್ರೈಂ ನಂಬರ್ 319/2006, ದಿನಾಂಕ:21.11.2006ರಲ್ಲಿ ಜಪ್ತು ಪಡಿಸಿರುವ ಲಾರಿ ನಕಲಿ ಸಂಖ್ಯೆ: ಟಿಎನ್–27ಎಲ್–4369 ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮದ್ ಹುಸೇನ್**

ಪಿ.ಆರ್.925

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.ಎಸ್‌ಡಿಕೆ/285/ಡಿಟಿಸಿಆರ್/2006–07, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಪೊಲೀಸ್ ಉಪ ನಿರೀಕ್ಷಕರು ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಪರಾರಿಯಾಗಿರುತ್ತಾರೆ<br>**ವಾಹನದ ಮಾಲೀಕರು**<br>ಶ್ರೀ ಜೋನ್ ಸಂದೀಪ್ ಕ್ಲೀಟಸ್ ಡಿಸೋಜ, ಬಿನ್ ಅಲ್ಬರ್ಟ್ ಡಿಸೋಜ, ನಟ್ಟಿಲ್ ಹೌಸ್, ಕುಂಜೂರು, ಬಜಪೆ ಅಂಚೆ, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ದಿನಾಂಕ:17.06.2006ರಂದು ಬಂಟ್ವಾಳ ನಗರ ಪೊಲೀಸ್ ಠಾಣಾ ಸರಹದ್ದಿನಲ್ಲಿ ರಾತ್ರಿ ಗಸ್ತು ಕರ್ತವ್ಯ ಮಾಡುತ್ತಿರುವ ಸಂದರ್ಭದಲ್ಲಿ ರಾತ್ರಿ ಸುಮಾರು 2–00 ಗಂಟೆ ಸಮಯದಲ್ಲಿ ಬಿ.ಸಿ. ರೋಡ್ ಕಡೆಯಿಂದ ಪಾಣೆಮಂಗಳೂರು ಕಡೆಗೆ ಬರುತ್ತಿದ್ದ ಮಾರುತಿ 800 ಕಾರು ನೋಂದಣಿ ಸಂಖ್ಯೆ: ಕೆಎ–19–ಎಂ–950 ನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಕಾರನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ಚಾಲಕ ಬಿ.ಸಿ. ರೋಡ್ ಕಡೆಗೆ ಓಡಿ ಪರಾರಿಯಾದನು. ಸದ್ರಿ ಕಾರನ್ನು ಸಂಶಯ ಮೇರೆಗೆ ಕೂಲಂಕುಷವಾಗಿ ಪರಿಶೀಲಿಸಿದಾಗ ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ತುಂಬಿರುವುದು ಕಂಡುಬಂದು, ಪ್ರತಿ ರಟ್ಟಿನ ಪೆಟ್ಟಿಗೆಯಲ್ಲಿ ತಲಾ 750 ಎಂಎಲ್‌ನ 12 ಬಾಟ್ಲಿಗಳಂತೆ ಒಟ್ಟು 35 ರಟ್ಟಿನ ಪೆಟ್ಟಿಗೆಗಳಲ್ಲಿ ಒಟ್ಟು 315–000 ಲೀಟರ್ ಮಾಸ್ಟರ್ ಬ್ಲಾಸ್ಟರ್ ವಿಸ್ಕಿ ಎಂಬ ಹೆಸರಿನ ಮದ್ಯವನ್ನು ಹೊಂದಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಣಿಕೆ ಮಾಡಿರುವುದು ಖಚಿತವಾಗಿರುವುದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 13, 14ರ ಪ್ರಕಾರ ಅಪರಾಧವಾಗಿದ್ದು, 32, 34, 43(1) (2) ರಂತೆ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಪಂಚರ ಸಮಕ್ಷಮ ಜಪ್ತು ಮಾಡಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಚಾಲಕನ ವಿರುದ್ಧ ತಕ್ಷೀರು ಸಂಖ್ಯೆ: 112/2006, ದಿನಾಂಕ:17.06.2006 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಬಕಾರಿ ಉಪ ನಿರೀಕ್ಷಕರು (1), ಜಾರಿ ಮತ್ತು ತನಿಖೆ ಬಂಟ್ವಾಳ ತಾಲ್ಲೂಕು ಇವರಿಗೆ ಈ ಪ್ರಾಧಿಕಾರದ ಆದೇಶದ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ:32:2006–07 ದಿನಾಂಕ:09.04.2007ರ ವರದಿಯಲ್ಲಿ ವಶಪಡಿಸಿಕೊಂಡ ಮದ್ಯದಿಂದ ತೆಗೆದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದರಿ ಮಾದರಿಗಳನ್ನು ವಿಶ್ಲೇಷಿಸಿದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರು ದಿನಾಂಕ:09.03.2007ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 44.0% ಇರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ ಸದರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಜಪ್ತಿ ಪಡಿಸಿಕೊಂಡ ಮದ್ಯವನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ಡಿಟಿಸಿಆರ್/285/2006–07 ದಿನಾಂಕ:18.04.2007ರಲ್ಲಿ ಜಪ್ತುಪಡಿಸಿಕೊಂಡಿರುವ 315.000 ಲೀ ಮದ್ಯವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿದ್ದು ಸದರಿ ಮುಟ್ಟುಗೋಲು ಆದೇಶದಂತೆ ಮದ್ಯವನ್ನು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರ ಸಮಕ್ಷಮ ದಿನಾಂಕ:10.09.2007 ರಂದು ಸೂಕ್ತ ಮಹಜರು ಜರುಗಿಸಿ ನಾಶಪಡಿಸಲಾಗಿರುತ್ತದೆ.

ಸಹಾಯಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ನೋಂದಣಿ ಸಂಖ್ಯೆ: ಕೆಎ–19–ಎಂ–950ರ ಬಿ ಎಕ್ಸ್‌ಟ್ರಾಕ್ಸ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ಮಾರುತಿ 800 ಕಾರು ನೋಂದಣಿ ಸಂಖ್ಯೆ:ಕೆಎ–19–ಎಂ–950 ರ ಆರ್.ಸಿ. ಮಾಲೀಕರಾದ ಶ್ರೀ ಜೋನ್ ಸಂದೀಪ್ ಕ್ಲೀಟಸ್ ಡಿಸೋಜ, ಬಿನ್ ಅಲ್ಬರ್ಟ್ ಡಿಸೋಜ, ನಟ್ಟಿಲ್ ಹೌಸ್, ಕುಂಜೂರು, ಬಜಪೆ ಅಂಚೆ, ಮಂಗಳೂರು ಎಂದು ದೃಢೀಕರಿಸಿರುತ್ತಾರೆ.

ವಾಹನದ ಆರ್.ಸಿ. ಮಾಲೀಕರಾದ ಶ್ರೀ ಜೋನ್ ಸಂದೀಪ್ ಕ್ಲೀಟಸ್ ಡಿಸೋಜ, ಬಿನ್ ಅಲ್ಬರ್ಟ್ ಡಿಸೋಜ, ನಟ್ವಿಲ್ ಹೌಸ್, ಕುಂಜೂರು, ಬಜಪೆ ಅಂಚೆ, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ವಶಪಡಿಸಿಕೊಂಡ ಕಾರನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಹಾಗೂ ಸದರಿ ನೋಟಿಸಿನಲ್ಲಿ 15 ದಿವಸದೊಳಗೆ ನಿಮ್ಮ ಹೇಳಿಕೆಗಳನ್ನು ಖುದ್ದಾಗಿ ಅಥವಾ ವಕೀಲರ ಮೂಲಕ ಸಲ್ಲಿಸಲು ಸೂಚಿಸಿದ್ದು, ತಪ್ಪಿದ್ದಲ್ಲಿ ನಿಮ್ಮ ಹೇಳಿಕೆ ಏನೂ ಇರುವುದಿಲ್ಲವೆಂಬುದಾಗಿ ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಜರುಗಿಸಲಾಗುವುದೆಂದು ದಿನಾಂಕ:19.09.2007ರಂದು ನೊಂದಣಿ ಅಂಚೆ ಮೂಲಕ ನೋಟಿಸು ನೀಡಲಾಗಿರುತ್ತದೆ. ಸದರಿ ನೋಟಿಸನ್ನು ವಾಹನದ ಮಾಲೀಕರಾದ ಶ್ರೀ ಜೋನ್ ಸಂದೀಪ್ ಕ್ಲೀಟಸ್ ಡಿಸೋಜ ರವರು ದಿನಾಂಕ:20.10.2007ರಂದು ಪಡೆದುಕೊಂಡು ಈ ಬಗ್ಗೆ ಅಂಚೆ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:17.06.2006 ರಂದು ಮಾರುತಿ 800 ಕಾರು ನೊಂದಣಿ ಸಂಖ್ಯೆ: ಕೆಎ–19–ಎಂ–950ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಚಾಲಕನು 315.000 ಲೀ ನಕಲಿ ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳರವರು ಪತ್ತೆಹಚ್ಚಿ, ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಗಳೆಂದು ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ನೊಂದಣಿ ಸಂಖ್ಯೆ: ಕೆಎ–19–ಎಂ–950ನ್ನು ವಶಪಡಿಸಿಕೊಂಡು ಸುಮಾರು ಎರಡು ವರ್ಷ ಕಳೆದರೂ ವಾಹನ ಮಾಲೀಕರಿಗೆ ನೀಡಿದ ಕಾರಣ ಕೇಳಿ ನೋಟೀಸನ್ನು ದಿನಾಂಕ:20.10.2007ರಂದು ಸ್ವೀಕರಿಸಿದ್ದರೂ, ನೋಟೀಸು ಸ್ವೀಕರಿಸಿ ಸುಮಾರು ಒಂದು ವರ್ಷ ಕಳೆದಿದ್ದರೂ, ಸದರಿ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಮಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಯಾವುದೇ ಅರ್ಜಿಯನ್ನು ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತು ಪಡಿಸಿರುವ ವಾಹನ ಮಾಲೀಕರ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ನಕಲಿ ಮದ್ಯ ಸಾಗಾಣಿಕೆಗೆ ಬಳಸಿರುವುದು ಕಂಡುಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ವಾಹನ ಮಾಲೀಕರಿಗೆ ನೋಟೀಸು ನೀಡಿ ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ವಾಹನ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದು ಮತ್ತು ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ದಿನಾಂಕ:17.06.2006ರಂದು ಸದರಿ ವಾಹನವನ್ನು ತಡೆದು ಶೋಧಿಸಿದ ಸಂದರ್ಭದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆ ಮಾಡುತ್ತಿರುವುದು ಪತ್ತೆಯಾಗಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಮದ್ಯವನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ ಪದಾರ್ಥವು ನಕಲಿ ಮದ್ಯವೆಂದು ದೃಢೀಕರಿಸಿರುವುದು ಇದು ಅಕ್ರಮವಾಗಿ ನಕಲಿ ಮದ್ಯ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರು ವಶಪಡಿಸಿಕೊಂಡ ಮಾರುತಿ 800 ಕಾರು ನೊಂದಣಿ ಸಂಖ್ಯೆ: ಕೆಎ–19–ಎಂ–950ನ್ನು ವಶಪಡಿಸಿಕೊಂಡು ಸುಮಾರು ಎರಡು ವರ್ಷಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದುದರಿಂದ ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗಿ ಹೋಗಿರುತ್ತದೆ. ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ

ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ನಕಲಿ ಮದ್ಯ ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಬಂಟ್ವಾಳ ನಗರ ಪೊಲೀಸ್ ಠಾಣೆ, ಬಂಟ್ವಾಳ ಇವರ ಕ್ರೈಂ ನಂಬರ್ 112/2006, ದಿನಾಂಕ:17.06.2006ರಲ್ಲಿ ಜಪ್ತು ಪಡಿಸಿರುವ ಮಾರುತಿ 800 ಕಾರು ನೊಂದಣಿ ಸಂಖ್ಯೆ: ಕೆಎ–19–ಎಂ–950ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.926

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ.ಎಸ್‌ಡಿಕೆ/50/ಡಿಟಿಸಿಆರ್/2007–08, ದಿನಾಂಕ:15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು (2)<br>ಇ.ಐ.ಬಿ.ದ.ಕ.ಜಿಲ್ಲೆ, ಮಂಗಳೂರು. | 1) ಜಿನೋ ಸೆಬೆಸ್ಟಿಯನ್ ಬಿನ್ ಎಂ. ದೇವಸ್ಯ ಮುತ್ತೇದತ್ತ ಮಾಣಿಕಡವು, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ (ಚಾಲಕ)<br>2) ಸುರೇಶ್ ಬಾಬು ಬಿನ್ ಶಂಕರನ್ ಕೂಂಬ್ರ, ಒಟ್ಟಪಾಲಂ, ಪೊನ್ನಾನಿ ತಾಲ್ಲೂಕು, ಪಾಲಕ್ಕಾಡ್ ಜಿಲ್ಲೆ, ಕೇರಳ ರಾಜ್ಯ. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (2), ಇ.ಐ.ಬಿ. ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಮತ್ತು ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖಾ ಮಂಗಳೂರು ದಕ್ಷಿಣ ಹಾಗೂ ಸಿಬ್ಬಂದಿಯವರೊಂದಿಗೆ ದಿನಾಂಕ:09.08.2007ರಂದು ಅಪರಾಹ್ನ 1.30 ಗಂಟೆ ಸಮಯದಲ್ಲಿ ಮಂಗಳೂರು ಕಡೆಯಿಂದ ಕೇರಳ ರಾಜ್ಯಕ್ಕೆ ಹೋಗುವ ರಾ.ಹೆ. 17ರಲ್ಲಿ ಇರುವ ಆರ್.ಟಿ.ಓ. ತಪಾಸಣಾ ಠಾಣೆಯಿಂದ ಸುಮಾರು 1/2 ಕಿ.ಮೀ. ದೂರದಲ್ಲಿ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ಒಂದು ಕಪ್ಪು ಬಣ್ಣದ ಕಾರು ಮಂಗಳೂರು ಕಡೆಯಿಂದ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ ಅದು ಸುಮಾರು 1/2 ಕಿ.ಮೀ. ದೂರದಷ್ಟು ಮುಂದೆ ನಿಲ್ಲಿಸಿ ಪರಿಶೀಲಿಸಿದಾಗ ಮದ್ಯಸಾರ ವಾಸನೆ ಬರುತ್ತಿರುವುದನ್ನು ಗಮನಿಸಿ, ಸದರಿ ವಾಹನ ಚಾಲಕನಲ್ಲಿ ಮದ್ಯಸಾರ ಎಷ್ಟು ಲೀಟರು ಇದೆ ಎಂದು ವಿಚಾರಿಸಿದಾಗ ಆತನು 300 ಲೀ.ನಷ್ಟು ಇರುವುದಾಗಿ ತಿಳಿಸಿರುತ್ತಾನೆ. ನಂತರ ಸಾಗಾಣಿಕೆ ಮಾಡಲು ಪರವಾನಿಗೆಯನ್ನು ಕೇಳಲಾಗಿ ಆತನು ಅದು ಯಾವುದು ಇಲ್ಲವೆಂದು ಸದರಿ ಮದ್ಯಸಾರವನ್ನು ಗೋವಾದಿಂದ ಕೇರಳ ರಾಜ್ಯದ ಕಲ್ಲಿಕೋಟೆಗೆ ಸಾಗಿಸಿರುವುದು ಎಂದು ತಿಳಿಸಿರುತ್ತಾನೆ. ಇದು ಅಕ್ರಮ ಮದ್ಯಸಾರ ಸಾಗಿಸುವುದು ಅಪರಾಧವೆಂದು ಆತನಿಗೆ ತಿಳಿಸಿ, ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಪ್ರಯುಕ್ತ ಸ್ಥಳೀಯ ಪಂಚರ ಹಾಗೂ ಸಿಬ್ಬಂದಿಯವರ ಸಮಕ್ಷಮ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 54ರ ಮೇರೆಗೆ ಸರ್ಚ್ ಮೆಮೋವನ್ನು ತಯಾರಿಸಿ ಶೋಧ ಕಾರ್ಯವನ್ನು ನಡೆಸಲಾಗಿತ್ತು. ಕಾರಿನ ಮಧ್ಯ ಭಾಗದ ಬಾಗಿಲನ್ನು ತೆರೆದು ಶೋಧ ನಡೆಸಲಾಗಿ ಮಧ್ಯದ ಸೀಟಿನ ಮೇಲೆ ಒಂದು ಇಎಲ್‌ಎಫ್ ಗ್ಯಾಸ್ ಎಂದು ನಮೂದಿಸಿದ ಖಾಲಿ ಸಿಲಿಂಡರ್ ಇದ್ದು ಸೀಟಿನ ಒರಗುವ ಕುಷನ್‌ನ ಹಿಂಬದಿಯ ಹಾಗೂ ಕಾರಿನ ಡಿಕ್ಕಿಗೆ ಸರಿಹೊಂದುವಂತೆ ನಿರ್ಮಿಸಿದ ಕಬ್ಬಿಣದ ಟ್ಯಾಂಕನ್ನು ಗುಪ್ತವಾಗಿ ಅಳವಡಿಸಿದ್ದು, ಡಿಕ್ಕಿಯಲ್ಲಿ ಸದರಿ ಟ್ಯಾಂಕಿನ ಮೇಲೆ ಕಾರ್ಡ್‌ಬೋರ್ಡನ್ನು ಅಳವಡಿಸಿ ಅದರ ಮೇಲೆ ಗ್ಯಾಸ್ ತುಂಬಿದ ಸಿಲಿಂಡರನ್ನು ಇಟ್ಟು ಕಾರಿನ ಹಿಂದಿನಿಂದ ಸಿಲಿಂಡರ್‌ಗೆ ಪೈಪನ್ನು ಅಳವಡಿಸಿ ಗ್ಯಾಸ್ ಮೂಲಕ ಇಂಜಿನನ್ನು ಚಲಾಯಿಸಿರುವುದು ಕಂಡು ಬಂತು. ಸದರಿ ಕಬ್ಬಿಣದ ಟ್ಯಾಂಕಿನ ಮೇಲೆ ಮುಚ್ಚಳವು ಮಧ್ಯದ ಸೀಟಿನ ಮೇಲು ಬದಿಯಲ್ಲಿದ್ದು, ಅದರ ಮೇಲೆ ರೆಕ್ಸಿನ್ ಕವಚವನ್ನು ಹಾಕಲಾಗಿತ್ತು. ಸದರಿ ಮುಚ್ಚಳವನ್ನು ತೆರೆದು ನೋಡಲಾಗಿ ಅದರಲ್ಲಿ ಸುಮಾರು 300 ಲೀ. ಮದ್ಯಸಾರವು

ಇರುವುದು ಕಂಡುಬಂತು. ನಂತರ ಅವರುಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಚಾಲಕನಾದ ಜಿನೋ ಸೆಬಸ್ಟಿಯನ್ ಬಿನ್ ಎಂ. ದೇವಸ್ಯ, ಪ್ರಾಯ 28 ವರ್ಷ, ಮುತ್ತೇದತ್ತ ಮಾಣಿಕಡವು, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ ಮತ್ತು ಸುರೇಶ್ ಬಾಬು ಬಿನ್ ಶಂಕರನ್ ಪ್ರಾಯ 29 ವರ್ಷ, ಕೂಂಬ್ರ, ಒಟ್ಟಪಾಲಂ, ಪೊನ್ನಾನಿ ತಾಲ್ಲೂಕು, ಪಾಲಕ್ಕಾಡ್ ಜಿಲ್ಲೆ, ಕೇರಳ ರಾಜ್ಯ ಎಂದು ತಿಳಿಸಿದ್ದು, ನಂತರ ಸಾಗಾಣಿಕೆಗೆ ಬಳಸಿದ ಕಪ್ಪು ಬಣ್ಣದ ಸಿಯಲ್ಲೊ ಡೆವೂಡ್ ಕಾರಿನ ನೋಂದಣಿ ಸಂಖ್ಯೆ: ಎಂಹೆಚ್–06–ಎಫ್–6537 ಆಗಿದ್ದು ಇದರ ಇಂಜಿನ್ ನಂ.G15MF53326213 ಮತ್ತು ಚಾಸೀಸ್ ನಂ. 03KO29724 ಇರುವುದು ಕಂಡು ಬಂತು. ಮತ್ತು ಆರೋಪಿಗಳಲ್ಲಿ ಹಾಜರಿದ್ದ ಎಲ್.ಜಿ. ಕಂಪೆನಿಯ ಮೊಬೈಲ್ ಪೋನ್ ಮತ್ತು ಸೊತ್ತುಗಳನ್ನು ವಶಪಡಿಸಿಕೊಂಡು ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮಹಜರನ್ನು ಸ್ಥಳದಲ್ಲಿ ತಯಾರಿಸಿ ಆರೋಪಿಗಳ ವಿರುದ್ಧ ಪ್ರಥಮ ಮಾಹಿತಿ ವರದಿ ಸಂಖ್ಯೆ: 4/2007–08, ದಿನಾಂಕ:09.08.2007ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ ಸೊತ್ತುಗಳನ್ನು ಹಾಗೂ ವಾಹನವನ್ನು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಳ್ಳಲು ಈ ಪ್ರಾಧಿಕಾರದಿಂದ ಅನುಮತಿಯನ್ನು ಪಡೆದುಕೊಂಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು (2), ಇ.ಐ.ಬಿ. ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ: ಸಿಆರ್ಎಂ:4:2007–08 ದಿನಾಂಕ:18.09.2007ರ ವರದಿಯಲ್ಲಿ ಸದರಿ ಮೊಕದ್ದಮೆಯಲ್ಲಿ ಜಪ್ತು ಮಾಡಿದ ಮದ್ಯಸಾರದಿಂದ ತೆಗೆದ ಮಾದರಿ ಸೀಸೆಗಳನ್ನು ಅಬಕಾರಿ ರಕ್ಷಕರ ಮೂಲಕ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರುರವರು ದಿನಾಂಕ:10.09.2007ರಂದು ನೀಡಿದ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಮದ್ಯಸಾರದ ಪ್ರಮಾಣ 94.0% ವಿ.ವಿ., 15.5 ಸೆಂ. ಗ್ರೇಡ್ ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಜಪ್ತು ಪಡಿಸಿಕೊಂಡ ಮದ್ಯಸಾರ ಮತ್ತು ಎರಡು ELF ಕಂಪೆನಿಯ ಗ್ಯಾಸ್ ಸಿಲಿಂಡರ್ ಮತ್ತು L.G. ಕಂಪೆನಿಯ ಮೊಬೈಲ್ ಫೋನ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ವರದಿಯನ್ನು ಸಲ್ಲಿಸಿರುತ್ತಾರೆ.

ತನಿಖಾಧಿಕಾರಿಗಳ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ. ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಇಐಬಿ/ ಡಿಟಿಸಿಆರ್/4/2007–08 ದಿನಾಂಕ:24.09.2007ರಲ್ಲಿ ಜಪ್ತು ಪಡಿಸಿಕೊಂಡಿರುವ 300 ಲೀ ಮದ್ಯಸಾರವನ್ನು (ಮಾದರಿಗಳನ್ನು ಹೊರತುಪಡಿಸಿ) ಮತ್ತು ಎರಡು ELF ಕಂಪೆನಿಯ ಗ್ಯಾಸ್ ಸಿಲಿಂಡರ್ ಮತ್ತು ಒಂದು L.G. ಕಂಪೆನಿಯ ಮೊಬೈಲ್ ಫೋನ್‌ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:06:ಪಿಐಎಸ್:2007, ದಿನಾಂಕ:13.07.2007ರ ನಿರ್ದೇಶನದಂತೆ ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪವಿಭಾಗ ಇವರ ಸಮಕ್ಷಮದಲ್ಲಿ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲಾಗಿದ್ದು, ಉಳಿದ ಸೊತ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಿಯಲ್ಲೋ ಡೆವೂಡ್ ಕಾರಿನ ನೋಂದಣಿ ಸಂಖ್ಯೆ: ಎಂಹೆಚ್–06–ಎಫ್–6537 ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ಪತ್ತೆಹಚ್ಚುವ ಸಲುವಾಗಿ ರಿಜಿನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಮುನ್ಸಿಪಲ್ ಆಫೀಸ್ ಕಾಂಪೌಂಡ್, ರಾಯಗಡ್ ಜಿಲ್ಲೆ, ಮಹಾರಾಷ್ಟ್ರ ರಾಜ್ಯ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:18.08.2007ರಂದು ಪತ್ರ ಬರೆಯಲಾಗಿತ್ತು. ಸದರಿ ಪತ್ರದ ಅನುಸಾರ ಸಾರಿಗೆ ಅಧಿಕಾರಿ, ಮುಂಬಯಿರವರು ವಶಪಡಿಸಿಕೊಂಡ ನೊಂದಣಿ ಸಂಖ್ಯೆಯ ಕಾರನ್ನು ಬೇರೆಯವರ ಹೆಸರಿಗೆ ನೊಂದಾಯಿಸಲು ದಿನಾಂಕ:01.10.2004 ರಂದು ರಿಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ಮುಂಬಯಿ ಪಶ್ಚಿಮರವರಿಗೆ ಎನ್.ಒ.ಸಿ. ಹೋಗಿರುತ್ತದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಇದರಂತೆ ವಾಹನ ಮಾಲೀಕರ ಹೆಸರು ಮತ್ತು ವಿಳಾಸವನ್ನು ಪಡೆಯುವ ಸಲುವಾಗಿ ರಿಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್, ಮುಂಬಯಿ ಪಶ್ಚಿಮ, III-D ಅಂಬಾವಳಿ ಜಿಲ್ಲೆ, ನಿಯರ್ ಮನೀಷ್ ನಗರ, ವರುಶೋವ ರೋಡ್, ಅಂಧೇರಿ ವೆಸ್ಟ್, ಮುಂಬಯಿರವರಿಗೆ ದಿನಾಂಕ:16.10.2007 ಮತ್ತು 10.03.2008ರಂದು ನೊಂದಣಿ ಅಂಚೆ ಮೂಲಕ ಪತ್ರ ಬರೆಯಲಾಗಿದ್ದು, ಸದರಿ ಪತ್ರವನ್ನು ದಿನಾಂಕ:25.10.2007 ಮತ್ತು 19.03.2008ರಂದು ಸ್ವೀಕರಿಸಿದ್ದು, ಸ್ವೀಕೃತಿ ಪತ್ರ ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಆದರೆ ವಾಹನದ ನೊಂದಾಣಿ ಬಗ್ಗೆ ಮತ್ತು ವಾಹನದ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್‌ನ್ನು ಈವರೆಗೆ ಈ ಪ್ರಾಧಿಕಾರಕ್ಕೆ ನೀಡಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:09.08.2007 ರಂದು ಸಿಯಲ್ಲೋ ಡೆವೂಡ್ ಕಾರಿನ ನೊಂದಣಿ ಸಂಖ್ಯೆ: ಎಂಹೆಚ್–06–ಎಫ್–6537 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 300ಲೀ ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು (2), ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರು ಪತ್ತೆಹಚ್ಚಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು (2), ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ವಶಪಡಿಸಿಕೊಂಡ ಸಿಯಲ್ಲೋ ಡೆವೂಡ್ ಕಾರಿನ ನೊಂದಣಿ ಸಂಖ್ಯೆ: ಎಂಹೆಚ್–06–ಎಫ್–6537ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆರೋಪಿಗಳು ಕಳ್ಳ ಸಾಗಾಣಿಕೆಯಲ್ಲಿ ಮತ್ತು ಯಾವುದೇ ರಹದಾರಿ ಪತ್ರವಿಲ್ಲದೇ ಕೇರಳ ರಾಜ್ಯಕ್ಕೆ ಮದ್ಯಸಾರವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡು ಬರುತ್ತದೆ. ಆದುದರಿಂದ ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗುವ ಸಂಭವವಿದ್ದು, ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಸಿಯಲ್ಲೋ ಡೆವೂಡ್ ಕಾರಿನ ನೊಂದಣಿ ಸಂಖ್ಯೆ: ಎಂಹೆಚ್–06–ಎಫ್–6537ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು (2), ಇಐಬಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ತಕ್ಷೀರು ಸಂ:4/2007–08, ದಿನಾಂಕ:09.08.2007ರಲ್ಲಿ ಜಪ್ತು ಪಡಿಸಿರುವ ಸಿಯಲ್ಲೋ ಡೆವೂಡ್ ಕಾರಿನ ನೊಂದಣಿ ಸಂಖ್ಯೆ: ಎಂಹೆಚ್–06–ಎಫ್–6537 (ಇಂಜಿನ್ ನಂ.G15MF53326213 ಮತ್ತು ಚಾಸೀಸ್ ನಂ. 03KO29724)ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮದ್ ಹುಸೇನ್**

ಪಿ.ಆರ್.927

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಮರಿಯಮ್ಮ ಥಾಮಸ್, ಶುಶ್ರೂಷಕಿ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ತುಮಕೂರು ಇವರ ದೋಷಾರೋಪಣಾ ಪಟ್ಟಿ ಸಂಖ್ಯೆ: ಬಿಆತು: ಡಿಪಿಎನ್:45:2004–05, ದಿನಾಂಕ:05.05.2005.
2) ನೌಕರರ ಸಮಜಾಯಿಷಿ ದಿನಾಂಕ:11.10.2005.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ:ಬಿಆತು:ಡಿಪಿಎನ್:45:04–05, ದಿನಾಂಕ: 12.04.2007.
4) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಬಿಕುನಿಕತು:65:2007–08, ದಿನಾಂಕ:01.12.2007.
5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿರುವ ಸೂಚನಾ ಪತ್ರ ಸಂಖ್ಯೆ: ಬಿಆತು: ಡಿಪಿಎನ್:45:04–05, ದಿನಾಂಕ:18.12.2007.
6) ಪ್ರಜಾಪ್ರಗತಿ ಕನ್ನಡ ದಿನಪತ್ರಿಕೆ ಪ್ರಕಟಣೆ ದಿನಾಂಕ:21.12.2008 ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆ ಪ್ರಕಟಣೆ ದಿನಾಂಕ:22.12.2008.

7) ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು, ತುಮಕೂರು ಇವರ ಪತ್ರ ಸಂಖ್ಯೆ: ಬಿಆತು:ಡಿಪಿಎನ್:45:04–05, ದಿನಾಂಕ:27.01.2009.

**ಪ್ರಸ್ತಾವನೆ:**

ಶ್ರೀಮತಿ ಮರಿಯಮ್ಮ ಥಾಮಸ್, ಶುಶ್ರೂಷಕಿ ಇವರು ಸಮುದಾಯ ಆರೋಗ್ಯ ಕೇಂದ್ರ, ಗುಬ್ಬಿ, ತುಮಕೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:17.04.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು ಈ ಬಗ್ಗೆ ಮೇಲೆ ಓದಲಾದ (1)ರಲ್ಲಿ ದೋಷಾರೋಪಣಾ ಪಟ್ಟಿ ಜಾರಿಗೊಳಿಸಿದ್ದು, ಮೇಲೆ ಓದಲಾದ (2)ರಲ್ಲಿ ನೌಕರರು ಸಮಜಾಯಿಷಿ ನೀಡಿದ್ದು ಅನಾರೋಗ್ಯದ ಕಾರಣ ನೀಡಿ ಆರೋಪ ನಿರಾಕರಿಸಿರುತ್ತಾರೆ. ಪ್ರಕರಣದ ಸತ್ಯಾಸತ್ಯತೆ ಕಂಡುಕೊಳ್ಳಲು ಮೇಲೆ ಓದಲಾದ (3) ರಲ್ಲಿ ಜಿಲ್ಲಾ ಕುಷ್ಠರೋಗ ನಿರ್ವಹಣಾಧಿಕಾರಿಗಳು, ತುಮಕೂರು ಇವರನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ನೇಮಿಸಿರುತ್ತಾರೆ. ವಿಚಾರಣಾ ಸಮಯದಲ್ಲಿ ಗೈರುಹಾಜರಿ ಬಗ್ಗೆ ವಿವರಣೆ ನೀಡಲು ಹಾಜರಾಗುವಂತೆ ಹಾಗೂ ಅನಾರೋಗ್ಯದ ಬಗ್ಗೆ ವೈದ್ಯಕೀಯ ತಪಾಸಣೆಗೆ ಒಳಪಡಲು ನೌಕರರಿಗೆ ಸೂಚಿಸಿದ್ದು, ನೌಕರರು ವಿಚಾರಣೆಗೆ ಬಾರದೆ ಇರುವುದರಿಂದ ಆರೋಪ ದೃಢಪಟ್ಟಿದೆಯೆಂದು ಮೇಲೆ ಓದಲಾದ (4) ರಲ್ಲಿ ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ಮೇಲೆ ಓದಲಾದ (5)ರಲ್ಲಿ ವಿಚಾರಣಾ ವರದಿಗೆ ಅಹವಾಲು ಸಲ್ಲಿಸಲು ನೌಕರರಿಗೆ ವಿಚಾರಣಾ ವರದಿ ಜಾರಿ ಮಾಡಿದ್ದು, ಲಕೋಟೆ ವಾಪಸ್ಸು ಬಂದಿರುತ್ತದೆ. ಮೇಲೆ ಓದಲಾದ (6)ರಲ್ಲಿ 2 ಪತ್ರಿಕೆಗಳಲ್ಲಿ ಪ್ರಕಟಣೆ ನೀಡಿದ್ದರೂ ನೌಕರರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಹಾಗೂ ಅಹವಾಲು ಸಲ್ಲಿಸಿರುವುದಿಲ್ಲ. ಆದುದರಿಂದ ಕಠಿಣ ಕ್ರಮ ಕೈಗೊಳ್ಳುವಂತೆ ಕೋರಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ತುಮಕೂರು ಇವರು ಮೇಲೆ ಓದಲಾದ (7) ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ವಿಚಾರಣಾ ವರದಿ ಕೂಲಂಕುಷವಾಗಿ ಪರಿಶೀಲಿಸಿದ್ದು, ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ಅಹವಾಲು ಸಲ್ಲಿಸಲು ವಿಫಲರಾಗಿರುತ್ತಾರೆ. ನೌಕರರ ಅನಾರೋಗ್ಯದ ಬಗ್ಗೆ ವೈದ್ಯಕೀಯ ಮಂಡಳಿ ಮುಂದೆ ಹಾಜರಾಗದೆ ನೈಸರ್ಗಿಕ ನ್ಯಾಯ ಪಡೆದುಕೊಳ್ಳಲು ವಿಫಲರಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (4) ಸಿಆರ್:20:2008–09, ಬೆಂಗಳೂರು, ದಿನಾಂಕ:20ನೇ ಮಾರ್ಚ್, 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಉಷಾ ವಾಸುನ್‌ಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಮರಿಯಮ್ಮ ಥಾಮಸ್, ಶುಶ್ರೂಷಕಿ ಸಮುದಾಯ ಆರೋಗ್ಯ ಕೇಂದ್ರ, ಗುಬ್ಬಿ ತುಮಕೂರು ಜಿಲ್ಲೆ, ಇವರ ಅನಧಿಕೃತ ಗೈರುಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(viii)ರ ಪ್ರಕಾರ ಮುಂದೆ ಸರ್ಕಾರಿ ಸೇವೆಗೆ ಅನರ್ಹರಾಗುವ ರೀತಿ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನ್‌ಕರ್**

ಪಿ.ಆರ್.314 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ವಾಣಿಜ್ಯ ತೆರಿಗೆ ಇಲಾಖೆ**

**ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರವರ ಕಛೇರಿ, (ಆಡಳಿತ) ಮೌ.ತೆ.ವಿ–3, ಬೆಂಗಳೂರು**

**ಸಂಖ್ಯೆ: ಜಂಆ(ಆ)/ಡಿವಿಪಿ–3/08–09, ಬೆಂಗಳೂರು, ದಿನಾಂಕ:23ನೇ ಮಾರ್ಚ್, 2009**

**ಕಳೆದುಕೊಂಡಿರುವ ಸಿ ನಮೂನೆ ಸಂಖ್ಯೆ:TCKR 3485525**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ ಮೆ: ಶ್ರೀರಾಂ ಡೈಯಾಗ್ನೋಸ್ಟಿಕ್ಸ್ ನಂ.77, ರಂಗರಾವ್‌ರಸ್ತೆ, ಶಂಕರಪುರಂ, ಬೆಂಗಳೂರು–4, ಟಿನ್ ಸಂಖ್ಯೆ:29430492487 ಈ ನೋಂದಾಯಿತ ವರ್ತಕರಿಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್‌ವಿಪಿ–100, ಬೆಂಗಳೂರು, ಕಛೇರಿಯವರು ನೀಡಿದ್ದ ಸಿ ನಮೂನೆ ಸಂಖ್ಯೆ:TCKR 3696534 ಒಂದು ಹಾಳೆಯನ್ನು ವರ್ತಕರು ಕಳೆದುಕೊಂಡಿರುತ್ತಾರೆ. ಕೇಂ.ಮಾ.ತೆ. ಕಾಯ್ದೆಯನ್ವಯ ಮೇಲೆ ತಿಳಿಸಿರುವ ಸಿ–ನಮೂನೆಯನ್ನು ರದ್ದುಗೊಳಿಸಲಾಗಿದೆ.

ಆದುದರಿಂದ, ಈ ಮೇಲ್ಕಂಡ ನಮೂನೆ–'ಸಿ' ಹಾಳೆಯನ್ನು ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಉಪಯೋಗಿಸಿದಲ್ಲಿ ಸರ್ಕಾರದ ರಾಜಸ್ವಕ್ಕೆ ಉಂಟಾಗುವ ನಷ್ಟಕ್ಕೆ ವೈಯಕ್ತಿಕವಾಗಿ ಅವರೇ ಜವಾಬ್ದಾರರಾಗಿರುತ್ತಾರೆ.

ಪ್ರಭಾರ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು

ಪಿ.ಆರ್.310 (ಆಡಳಿತ), ಮೌ.ತೆ.ವಿ–3, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ. 165/2005–06, ದಿನಾಂಕ: 18ನೇ ಜುಲೈ 2008**

**ಅಬಕಾರಿ ಉಪ ನಿರೀಕ್ಷಕರು, ನಂ.2, ಕಡೂರು ತಾಲ್ಲೂಕು, ಜಾರಿ ಮತ್ತು ತನಿಖೆ ಇವರ ಪ್ರ.ವ.ವ. ನಂ.11/2005–06, ದಿನಾಂಕ: 17–03–2006**

**ಉಪಸ್ಥಿತರು** ಕೆ.ಸಿ. ಹರಿದಾಸ್
ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ಉಪ ನಿರೀಕ್ಷಕರು, | ಎ:1 ನಾಗರಾಜ್ ಬಿನ್, ಹುಲಿಕೆರೆ |
| ನಂ.2 ಜಾರಿ ಮತ್ತು ತನಿಖೆ ಕಡೂರು | ಎ:2 ಎಂ.ಸಿ. ಗಣೇಶ್ ಬಿನ್ ಪೆರಿಯತಂಬಿ (ವಾಹನದ ಮಾಲೀಕರು) |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 17.03.2006 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಅಬಕಾರಿ ಉಪ ಅಧೀಕ್ಷಕರು, ಚಿಕ್ಕಮಗಳೂರು ಉಪ ವಿಭಾಗ ಇವರ ಆದೇಶದ ಅನ್ವಯ ಸಂಜೆ 6.25 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ನಂ.2, ಕಡೂರು ತಾಲ್ಲೂಕು ಜಾರಿ ಮತ್ತು ತನಿಖೆ ಇವರು ಕಡೂರು ತಾಲ್ಲೂಕು ಹುಲಿಕೆರೆಯಿಂದ ಸ್ವಾಮಿಕಟ್ಟೆಗೆ ಹೋಗುವ ರಸ್ತೆಯಲ್ಲಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ, ಹುಲಿಕೆರೆ ಕಡೆಯಿಂದ ಒಂದು ಬೈಕ್ ಬರುತ್ತಿದ್ದುದನ್ನು ಗಮನಿಸಿ ಅದನ್ನು ತಡೆದು ನಿಲ್ಲಿಸಿದಾಗ ಬೈಕ್‌ನಲ್ಲಿ ಒಂದು ಚೀಲವನ್ನು ಹೊಂದಿದ್ದನ್ನು ಕಂಡು ಆ ಚೀಲದಲ್ಲಿ ಏನು ಇದೆ ಎಂದು ಕೇಳಿದಾಗ ಸಾರಾಯಿ ಪ್ಯಾಕೆಟ್‌ಗಳು ಎಂದು ತಿಳಿಸಿದಾಗ ಇವುಗಳನ್ನು ಹೊಂದಿ ಸಾಗಾಣಿಕೆ ಮಾಡಲು ಏನಾದರೂ ಪರವಾಗಿ ವಗೈರೆ ಇದೆಯೇ ಎಂದು ಕೇಳಿದಾಗ ಯಾವುದೇ ಪರವಾನಗಿ ಇಲ್ಲವೆಂದು ತಿಳಿಸಿದನು ನಂತರ ಇವು ಅಕ್ರಮ ಸಾರಾಯಿ ಪ್ಯಾಕೆಟ್‌ಗಳ ಸಾಗಾಣಿಕೆ ಎಂದು ದೃಢಪಡಿಸಿಕೊಂಡು, ಆ ಚೀಲವನ್ನು ಬಿಚ್ಚಿ ನೋಡಿ ಎಣಿಸಲಾಗಿ 100 ಮಿಲಿಯ 55 ಸಾರಾಯಿ ಸ್ಯಾಚೆಟ್‌ಗಳು ಇದ್ದು, 8 ಸಾರಾಯಿ ಪ್ಯಾಕೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆಯಲಾಯಿತು. ನಂತರ ವಾಹನ ಸಂಖ್ಯೆಯನ್ನು ಪರಿಶೀಲಿಸಲಾಗಿ, ಕೆ.ಎ. 14 – ಎಲ್: 240 ಟಿ.ವಿ.ಎಸ್. ಸುಜುಕಿ ಬೈಕ್ ಆಗಿರುತ್ತದೆ. ವಾಹನದ ಚಾಲಕನ ಹೆಸರು ವಿಳಾಸ ಕೇಳಲಾಗಿ, ನಾಗರಾಜ ಬಿನ್ ಸಗನಪ್ಪ 35 ವರ್ಷ ಬಿಳಿ ಮೊಗಶೆಟ್ಟಿ ಜನಾಂಗ, ವ್ಯವಸಾಯ ವೃತ್ತಿ, ಹುಲಿಕೆರೆ ವಾಸ, ಸಖರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು ಎಂದು ತಿಳಿಸಿರುತ್ತಾನೆ. ಸಾಗಾಣಿಕೆಯನ್ನು ಮಾಡುತ್ತಿದ್ದ ಸಾರಾಯಿಯು ಅನಧಿಕೃತ ಸಾಗಾಣಿಕೆಯೆಂದು ದೃಢಪಡಿಸಿಕೊಂಡು ಪಂಚರ ಸಮಕ್ಷಮ ಸ್ಥಳದಲ್ಲಿ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಸಾರಾಯಿ ಹಾಗೂ ವಾಹನ ಸಂಖ್ಯೆ: ಕೆ.ಎ: 14 – ಎಲ್: 240 ಟಿ.ವಿ.ಎಸ್. ಸುಜುಕಿ ಬೈಕ್‌ನ್ನು ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ಬಂಧಿಸಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿ ಪ್ರ.ಮಾ.ವ. ಸಂಖ್ಯೆ: 11/2005–06, ದಿನಾಂಕ: 17–03–2006 ರಂದು ಮೊಕದ್ದಮೆ ದಾಖಲು ಮಾಡಿಕೊಂಡು, ವರದಿಯನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೆ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಪ್ರಕರಣದ ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ದಿನಾಂಕ: 09.02.2004 ರಂದು ನೀಡಿರುವ "ಬಿ" ವರದಿಯಲ್ಲಿ ಶ್ರೀ ಎಂ.ಪಿ. ಗಣೇಶ್ ಬಿನ್ ಪೆರಿಯತಂಬಿ, ಶ್ರೀ ಧರ್ಮಸ್ಥಳ ನಿಲಯ, ಬೊಮ್ಮನಕಟ್ಟೆ, ನವಿಲೆ ಅಂಚೆ, ಶಿವಮೊಗ್ಗ ಇವರು ವಾಹನದ ಮಾಲೀಕರೆಂದು ತಿಳಿದುಬಂದಿರುತ್ತದೆ.

ದಿನಾಂಕ: 03.05.2007 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಬಿ) ಪ್ರಕಾರ ವಾಹನದ ಮಾಲೀಕರಾದ ಹಾಗೂ ಎರಡನೇ ಆರೋಪಿಯಾದ ಶ್ರೀ ಎಂ.ಪಿ. ಗಣೇಶ್ ಬಿನ್ ಪೆರಿಯತಂಬಿ, ಶ್ರೀ ಧರ್ಮಸ್ಥಳ ನಿಲಯ, ಬೊಮ್ಮನಕಟ್ಟೆ, ನವಿಲೆ ಅಂಚೆ, ಶಿವಮೊಗ್ಗ ಹಾಗೂ ಒಂದನೇ ಆರೋಪಿಯಾದ ಶ್ರೀ ನಾಗರಾಜ್ ಬಿನ್ ಸಗನಪ್ಪ, ಹುಲಿಕೆರೆ ವಾಸ, ಸಖರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು ಇವರಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಹೇಳಿಕೆ ನೀಡಲು ನೋಟೀಸ್‌ನ್ನು ನೋಂದಾಯಿತ ಅಂಚೆ ಮೂಲಕ ಜಾರಿಮಾಡಲಾಗಿರುತ್ತದೆ.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ದಿನಾಂಕ: 17.06.2008 ರಂದು ವಾಹನಕ್ಕೆ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳ ಮೌಲ್ಯ ನಿಗದಿಪಡಿಸಿದ ದೃಢೀಕರಣ ಪತ್ರವನ್ನು ತನಿಖಾಧಿಕಾರಿ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಮೊಕದ್ದಮೆ ದಾಖಲಾಗಿ ಸುಮಾರು 2 ವರ್ಷಕ್ಕಿಂತ ಹೆಚ್ಚು ಅವಧಿ ಮುಗಿದರೂ ವಾಹನದ ಮಾಲೀಕರಿಗೆ ಪ್ರಾಧಿಕಾರದಮುಂದೆ ಹಾಜರಾಗಲು ಸಾಕಷ್ಟು ಸಮಯಾವಕಾಶ ನೀಡಿದಾಗಲೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಹಾಗೂ ಇದು ವಾಹನದ ಮಾಲೀಕರು ಹಾಗೂ ಆರೋಪಿತರಿಗೆ ವಾಹನದ ಮೇಲೆ ಆಸಕ್ತಿ ಇಲ್ಲದೇ ಇರುವುದು ಕಂಡು ಬಂದಿರುತ್ತದೆ. ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ಜಫ್ತುಪಡಿಸಿದ ವಾಹನ ಸಂಖ್ಯೆ: ಕೆ.ಎ. 14 – ಎಲ್: 240 ಟಿ.ವಿ.ಎಸ್. ಸುಜುಕಿ ಬೈಕ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 18ನೇ ಜುಲೈ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶದ ದಿನಾಂಕದಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,<br>
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 906

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ

**ವಿಷಯ:** ಸಮಾಪನೆಗೊಂಡಿರುವ ಶ್ರೀ ವಿಘ್ನೇಶ್ವರ ವಿವಿಧೋದ್ದೇಶ ಸಹಕಾರ ಸಂಘ ನಿ, ಎಂ.ಎಸ್.ಪಿ ಕಾಂಪ್ಲೆಕ್ಸ್, ದಾವಣಗೆರೆ, ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಪತ್ರ ಸಮ ಸಂಖ್ಯೆ:ಡಿಆರ್/ಡಿವಿಜಿ/ಸಮಾಪನೆ/ಸಿಆರ್ 09/2007–08, ದಿ: 12.12.2007.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ದಿ:18.07.2008.

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉದ್ದೇಶಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಆದರೆ ಸಮಾಪನಾಧಿಕಾರಿಗಳು ಸಂಘದ ಪ್ರಭಾರ ವಹಿಸಿಕೊಂಡಿರುವುದಿಲ್ಲ. ಅದು ಅಲ್ಲದೆ, ಉಲ್ಲೇಖ 2ರ ಪತ್ರದಲ್ಲಿ ಸಹಾಯಕ ನಿಬಂಧಕರು, ದಾವಣಗೆರೆ ಇವರು ದಿ:29.06.2008 ರಂದು ಸಂಘದ ಸರ್ವ ಸದಸ್ಯರು ಸಭೆ ಸೇರಿ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆಂದು ತಿಳಿಸುತ್ತಾ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ, ಸದರಿ ಸಂಘವನ್ನು ಸಂಘದ ಸದಸ್ಯರ ಹಿತದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ಹಾಗೂ ದಿ: 29.06.2008ರ ಸಭೆಯಲ್ಲಿ ಕೈಗೊಂಡಿರುವ ನಿರ್ಣಯದಂತೆ ಸಂಘವು ಕಾರ್ಯನಿರ್ವಹಿಸುತ್ತಿರುವ ಸ್ಥಳದ ವಿವರ ಸಂಘದ ನಾಮಫಲಕ ಇಲಾಖೆಗೆ ಸಲ್ಲಿಸಬೇಕಾದ ಮಾಹಿತಿಗಳನ್ನು ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ 1, ದಾವಣಗೆರೆ ಇವರ ಮೂಲಕ ಸಲ್ಲಿಸುವಂತೆ ಸೂಚಿಸುತ್ತಾ ಮತ್ತು ಸಂಘದ ಸದಸ್ಯರು ಹಾಕಿಕೊಂಡಿರುವ ಕ್ರಿಯಾ ಯೋಜನೆ ಪ್ರಕಾರ ಪ್ರತಿ

ಆರು ತಿಂಗಳಿಗೊಮ್ಮೆ ಗುರಿ ಸಾಧನೆಯ ಪ್ರಗತಿ ತಃಖ್ತೆಯನ್ನು ಈ ಕಚೇರಿಗೂ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಗೂ ಸಲ್ಲಿಸುವಂತೆ ಸೂಚಿಸಿದೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ನಂ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–09/2007–08, ದಿನಾಂಕ: 30ನೇ ಜುಲೈ 2008**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಮ್:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಶ್ರೀ ವಿಘ್ನೇಶ್ವರ ವಿವಿಧೋದ್ದೇಶ ಸಹಕಾರ ಸಂಘ ನಿ, ಎಂ.ಎಸ್.ಪಿ. ಕಾಂಪ್ಲೆಕ್ಸ್, ದಾವಣಗೆರೆ ಇದರ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿ ಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**ಷರತ್ತುಗಳು**

1) ಪುನಃಶ್ಚೇತನಗೊಂಡ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆ ಮಾಡಿಸಿ ಸದರಿ ವರದಿಯನ್ನು ಈ ಕಚೇರಿಗೆ ಸಲ್ಲಿಸುವುದು.

2) ಕ್ರಿಯಾಯೋಜನಾ ರೀತ್ಯಾ ಕಾರ್ಯಕ್ರಮ ಹಮ್ಮಿಕೊಂಡು ಪ್ರಗತಿ ಸಾಧಿಸುವುದು.

3) ಬಿ.ಡಿ.ಸಿ.ಸಿ. ಬ್ಯಾಂಕ್‌ನೊಂದಿಗೆ ವ್ಯವಹಾರ ಮಾಡತಕ್ಕದ್ದು.

ಒಂದು ವೇಳೆ ಷರತ್ತಿಗನುಗುಣವಾಗಿ 6 ತಿಂಗಳ ನಂತರ ಯಾವುದೇ ಪ್ರಗತಿ ಸಾಧಿಸದಿದ್ದಲ್ಲಿ, ಸಂಘವನ್ನು ನೇರವಾಗಿ ಸಮಾಪನೆಗೊಳಿಸಲಾಗುವುದು.

ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ, ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ: 30.07.2008 ರಂದು ಹೊರಡಿಸಿದೆ.

ಪಿ.ಆರ್. 903 ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು ಬೆಂಗಳೂರು**

**ವಿಷಯ:** ಶ್ರೀಮತಿ ಕೆ.ಭಾರತಿ, ಶುಶ್ರೂಷಕಿ, ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ವೈದ್ಯಕೀಯ ಅಧೀಕ್ಷಕರು, ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇವರ ಪತ್ರ ಸಂಖ್ಯೆ:ಮಮಆ:ಸಿಶಾ:43:06–07, ದಿನಾಂಕ:13.08.07.
2. ಅಧೀಕ್ಷಕರು, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇವರ ವರದಿ ಸಂಖ್ಯೆ:ಟಿಟಿಅ:ದಾ:ಸಿಶಾ(2): 200:07–08, ದಿ:10.4.08.
3. ವೈದ್ಯಕೀಯ ಅಧೀಕ್ಷಕರು, ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇವರ ಪತ್ರ ಸಂಖ್ಯೆ:ಮಮಅ:ಸಿಶಾ:43:08–09, ದಿನಾಂಕ:10.06.08.

**ಪ್ರಸ್ತಾವನೆ:**

ಶ್ರೀಮತಿ ಕೆ.ಭಾರತಿ, ಶುಶ್ರೂಷಕಿ, ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇವರು ದಿನಾಂಕ 8.5.06 ರಿಂದ 25.06.06ರ ವರೆಗೆ ಗೃಹಕೃತ್ಯಕ್ಕಾಗಿ ರಜೆ ಮನವಿ ಸಲ್ಲಿಸಿದ್ದು ದಿನಾಂಕ: 26.05.06 ರಂದು ಕರ್ತವ್ಯಕ್ಕೆ ಹಾಜರಾಗಬೇಕಿದ್ದು ಹಾಜರಾಗಿರುವುದಿಲ್ಲ. ಕರ್ತವ್ಯಕ್ಕೆ ಹಾಜರಾಗುವಂತೆ ಅನೇಕ ಜ್ಞಾಪನಾ ಪತ್ರಗಳನ್ನು ಸಲ್ಲಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಮೇಲೆ ಓದಲಾದ (1)ರಲ್ಲಿ ವೈದ್ಯಕೀಯ ಅಧೀಕ್ಷಕರು ವರದಿ ಸಲ್ಲಿಸಿರುತ್ತಾರೆ. ಸದರಿ ನೌಕರರಿಗೆ ಅನೇಕ ಮರುಕರೆ ಪತ್ರ ಕಳುಹಿಸಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 19.3.08 ರಲ್ಲಿ ರಾಜೀನಾಮೆ ಸಲ್ಲಿಸಿರುತ್ತಾರೆಂದು ಮೇಲೆ ಓದಲಾದ (2) ರಲ್ಲಿ ತಿಳಿಸಿದ್ದು ಮೇಲೆ ಓದಲಾದ(3) ರಲ್ಲಿ ನೌಕರರ ಸೇವಾ ವಿವರ ಸಲ್ಲಿಸಿರುತ್ತಾರೆ. ಸದರಿ ನೌಕರರು ದಿನಾಂಕ: 28.6.2004 ರಂದು ಸರ್ಕಾರಿ ಕೆಲಸಕ್ಕೆ ಹಾಜರಾಗಿದ್ದು, ಖಾಯಂಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿ ಆಗಿದ್ದು ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸಲು ತೀರ್ಮಾನಿಸಿದ್ದು ಈ ಆದೇಶ.

**ಆದೇಶ ಸಂಖ್ಯೆ:ಡಿಪಿಎನ್ (23):ಸಿಆರ್:24:2007–08, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀಮತಿ ಕೆ.ಭಾರತಿ, ಶುಶ್ರೂಷಕಿ, ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ, ಇವರನ್ನು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳ ನಿಯಮ 5(1)(ಬಿ)

ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನೇಮಕ ಮಾಡಿದ ಹುದ್ದೆಗೆ ಯೋಗ್ಯರಲ್ಲವೆಂದು ನಿರ್ಣಯಿಸಿ, ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಿ ಆದೇಶಿಸಿರುತ್ತೇನೆ.

**ಡಾ. ಉಷಾ ವಾಸುನ್‌ಕರ್**

ಪಿ.ಆರ್. 991 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ:ಎಲ್.ಎನ್.ಡಿ:(ಪೂ)ಸಿಆರ್:182/07–08, ದಿನಾಂಕ: 31ನೇ ಜುಲೈ 2008**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ. 118/5 ರಲ್ಲಿನ 1–36 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ನಡವಳಿ ಆದೇಶದ ಸಂ:ಆರ್.ಡಿ:265:ಎಲ್‌ಜಿಬಿ:2007 (ಭಾಗ–6) ಬೆಂಗಳೂರು, ದಿನಾಂಕ:18.10.2007 ಮತ್ತು ನಂ.ಆರ್.ಡಿ:139 ಪಿಆರ್‌ಎಸ್:2008 ದಿನಾಂಕ:05.04.2008ರ ಅರೆ ಸರ್ಕಾರಿ ಪತ್ರ.
2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿ:ಸಸ:ಸಿಆರ್: 490/07–08, ದಿನಾಂಕ: 24.10.2007.
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ: 03.11.2007
4. ಮುಖ್ಯ ಸಂಚಾರ ವ್ಯವಸ್ಥಾಪಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರ ಸಂಖ್ಯೆ: ಬೆಂಮಸಾಸಂ:ಕೇಕ:ವಾಣಿಜ್ಯ:ಆಸ್ತಿ /08–09 ದಿನಾಂಕ:18.07.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3,313–28 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ/ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ, ಉಲ್ಲೇಖ(1)ರಲ್ಲಿನ ಸರ್ಕಾರದ ನಡವಳಿ ಆದೇಶದ ಸಂಖ್ಯೆ:ಆರ್‌ಡಿ265:ಎಲ್‌ಜಿಬಿ/2007 (ಭಾ–6), ಬೆಂಗಳೂರು ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ. 118/5 ರಲ್ಲಿನ 1–36 ಎಕರೆ/ಗುಂಟೆ ಗೋಮಾಳದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಶೇ.50 ರಷ್ಟು ಮಾರುಕಟ್ಟೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರ ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 76,46,111–00 (ಎಪ್ಪತ್ತಾರು ಲಕ್ಷದ ನಲವತ್ತಾರು ಸಾವಿರದ ಒಂದು ನೂರ ಹನ್ನೊಂದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ತಿಳುವಳಿಕೆ ಪತ್ರವನ್ನು ನೀಡಲಾಗಿರುತ್ತದೆ. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.18,19 ಮತ್ತು 20 ರಂತೆ ದಿನಾಂಕ:14.07.2008 ರಂದು ಹಣ ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ನಕ್ಷೆಯೊಂದಿಗೆ ಸಂಸ್ಥೆಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ. 118/5 ರಲ್ಲಿನ 1–36 ಎಕರೆ/ಗುಂಟೆ ವಿಸ್ತೀರ್ಣದ ಸರ್ಕಾರಿ ಗೋಮಾಳ ಎಂದು ವರ್ಗೀಕೃತವಾದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4. ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ, ಆಧಾರ, ಭೋಗ್ಯಕ್ಕೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯುವ ಉದ್ದೇಶಕ್ಕೆ ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಇತರೆ ಪ್ರಾಧಿಕಾರಗಳು ಮುಟ್ಟುಗೋಲು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನಿಗದಿತ ಶುಲ್ಕ ಸಂದಾಯ/ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
10. ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
12. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
13. ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
13. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ಫಾರಂ-VI ರಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 978

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ : ಎಲ್ಎನ್‌ಡಿ [ಎನ್.ಎ] ಸಿಆರ್ 133/2007–08, ದಿನಾಂಕ: 14ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ದಾಸೇನಹಳ್ಳಿ ಗ್ರಾಮದ ಸರ್ವೆ ನಂ : 33ರಲ್ಲಿ 0–33 ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 1014 ಎಲ್‌ಜಿಬಿ 2007, ದಿನಾಂಕ:3.9.2007.
2. ತಹಸೀಲ್ದಾರ್ ರವರ ವರದಿ ಸಂಖ್ಯೆ : ಎಲ್ಎನ್‌ಡಿ [ಎನ್.ಎ.] ಸಿಆರ್ 133/2007–08, ದಿನಾಂಕ: 20.07.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ದಾಸೇನಹಳ್ಳಿ ಗ್ರಾಮದ ಸರ್ವೆ ನಂ : 33ರಲ್ಲಿ 0–33 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ದಾಸೇನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ದಾಸೇನಹಳ್ಳಿ ಗ್ರಾಮದ ಸರ್ವೆ ನಂ : 33ರಲ್ಲಿನ 0–33 ಗುಂಟೆ ಜಮೀನನ್ನು ದಾಸೇನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ದಾಸೇನಹಳ್ಳಿ ಗ್ರಾಮದ ಸರ್ವೆ ನಂ : 33ರಲ್ಲಿನ 0–33 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ದಾಸೇನಹಳ್ಳಿ ಗ್ರಾಮದ ಸರ್ವೆ ನಂ : 33ರಲ್ಲಿನ 0–33 ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ : ಎಲ್‌ಎನ್‌ಡಿ [ಎನ್.ಎ] ಸಿಆರ್ 116/2007–08, ದಿನಾಂಕ: 27ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ : 43ರಲ್ಲಿ 1–20 ಎಕರೆ / ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 282 ಎಲ್‌ಜಿಬಿ 2008, ದಿನಾಂಕ:13.5.2008.
2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 119/2007–08, ದಿನಾಂಕ: 21.06.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ : 43ರಲ್ಲಿ 1–20 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಗುಡ್ಡದಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ : 43ರಲ್ಲಿನ 1–20 ಎಕರೆ / ಗುಂಟೆ ಜಮೀನನ್ನು ಗುಡ್ಡದಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ : 43ರಲ್ಲಿನ 1–20 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ : 43ರಲ್ಲಿನ 1–20 ಎಕರೆ / ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ

ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ : ಎಲ್‌ಎನ್‌ಡಿ [ಎನ್.ಎ] ಸಿಆರ್ 121/2007–08, ದಿನಾಂಕ: 21ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಹನಿಯೂರು ಗ್ರಾಮದ ಸರ್ವೆ ನಂ : 90ರಲ್ಲಿ 2–09 ಎಕರೆ / ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 115 ಎಲ್‌ಜಿಬಿ 2008, ದಿನಾಂಕ:28.2.2008.

2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 95/2007–08.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಹನಿಯೂರು ಗ್ರಾಮದ ಸರ್ವೆ ನಂ : 90ರಲ್ಲಿ 2–09 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಹನಿಯೂರು ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಹನಿಯೂರು ಗ್ರಾಮದ ಸರ್ವೆ ನಂ : 90ರಲ್ಲಿನ 2–09 ಎಕರೆ / ಗುಂಟೆ ಜಮೀನನ್ನು ಹನಿಯೂರು ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಹನಿಯೂರು ಗ್ರಾಮದ ಸರ್ವೆ ನಂ : 90ರಲ್ಲಿನ 2–09 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಹನಿಯೂರು ಗ್ರಾಮದ ಸರ್ವೆ ನಂ : 90ರಲ್ಲಿನ 2–09 ಎಕರೆ / ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.

4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 979

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ : ಎಲ್‌ಎನ್‌ಡಿ [ಎನ್.ಎ] ಸಿಆರ್ 75/2007–08, ದಿನಾಂಕ: 25ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹುಣಸಮಾರನಹಳ್ಳಿ ಗ್ರಾಮದ ಸರ್ವೆ ನಂ : 179/ಪಿ1ರಲ್ಲಿ 2–20 ಎಕರೆ / ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 1210 ಎಲ್‌ಜಿಬಿ 2007, ದಿನಾಂಕ:6.11.2007.
2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 72/2007–08, ದಿನಾಂಕ:15.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಹುಣಸಮಾರನಹಳ್ಳಿ ಗ್ರಾಮದ ಸರ್ವೆ ನಂ : 179/ಪಿ1ರಲ್ಲಿ 2–20 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಹುಣಸಮಾರನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಹುಣಸಮಾರನಹಳ್ಳಿ ಗ್ರಾಮದ ಸರ್ವೆ ನಂ : 179/ಪಿ1ರಲ್ಲಿನ 2–20 ಎಕರೆ / ಗುಂಟೆ ಜಮೀನನ್ನು ಹುಣಸಮಾರನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಹುಣಸಮಾರನಹಳ್ಳಿ ಗ್ರಾಮದ ಸರ್ವೆ ನಂ : 179/ಪಿ1ರಲ್ಲಿನ 2–20 ಎಕರೆ / ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಹುಣಸಮಾರನಹಳ್ಳಿ ಗ್ರಾಮದ ಸರ್ವೆ ನಂ : 179/ಪಿ1ರಲ್ಲಿನ 2–20 ಎಕರೆ / ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ : ಎಲ್‌ಎನ್‌ಡಿ [ಎನ್.ಎ] ಸಿಆರ್ 76/2007–08, ದಿನಾಂಕ: 21ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ ಸರ್ವೆ ನಂ : 133ರಲ್ಲಿ 1–00 ಎಕರೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 844 ಎಲ್‌ಜಿಬಿ 2007, ದಿನಾಂಕ:20.11.2007.

2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 69/2007–08, ದಿನಾಂಕ:15.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ ಸರ್ವೆ ನಂ : 133ರಲ್ಲಿ 1–00 ಎಕರೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಕಟ್ಟಿಗೇನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ ಸರ್ವೆ ನಂ : 133ರಲ್ಲಿನ 1–00 ಎಕರೆ ಜಮೀನನ್ನು ಕಟ್ಟಿಗೇನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಕಟ್ಟಿಗೇನಹಳ್ಳಿ ಗ್ರಾಮದ ಸರ್ವೆ ನಂ : 133ರಲ್ಲಿನ 1–00 ಎಕರೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ ಸರ್ವೆ ನಂ : 133ರಲ್ಲಿನ 1–00 ಎಕರೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ : ಎಲ್‌ಎನ್‌ಡಿ [ಎನ್.ಎ] ಸಿಆರ್ 118/2007–08, ದಿನಾಂಕ: 29ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಮಾಕ್ಷಿಪುರ ಗ್ರಾಮದ ಸರ್ವೆ ನಂ : 41/1ರಲ್ಲಿ 0–28 ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 108 ಎಲ್‌ಜಿಬಿ 2008, ದಿನಾಂಕ:29.2.2008.

2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 102/2007–08, ದಿನಾಂಕ:21.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಮಾಕ್ಷಿಪುರ ಗ್ರಾಮದ ಸರ್ವೆ ನಂ : 41/1ರಲ್ಲಿ 0–28 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಕಾಮಾಕ್ಷಿಪುರ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಮಾಕ್ಷಿಪುರ ಗ್ರಾಮದ ಸರ್ವೆ ನಂ : 41/1ರಲ್ಲಿನ 0–28 ಗುಂಟೆ ಜಮೀನನ್ನು ಕಾಮಾಕ್ಷಿಪುರ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಕಾಮಾಕ್ಷಿಪುರ ಗ್ರಾಮದ ಸರ್ವೆ ನಂ : 41/1ರಲ್ಲಿನ 0–28 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಕಾಮಾಕ್ಷಿಪುರ ಗ್ರಾಮದ ಸರ್ವೆ ನಂ : 41/1ರಲ್ಲಿನ 0–28 ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ಪಿ.ಆರ್. 980 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರವರ ಕಾರ್ಯಾಲಯ, ರಾಯಚೂರು – 584101**

**ನಡವಳಿಗಳು**

**ವಿಷಯ:** ಶ್ರೀಮತಿ ನಿವೇದಿತ ಸ.ಶಿ. ಸರ್ಕಾರಿ ಕಿ.ಪ್ರಾ.ಶಾಲೆ, ಗುರ್ಜಾಪೂರು, ತಾ॥ ಜಿ॥ ರಾಯಚೂರು ಇವರು ಧೀರ್ಘಕಾಲ ಅವಧಿಯವರಿಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಇರುವ ಬಗ್ಗೆ ಅಂತಿಮ ಆದೇಶ.

**ಉಲ್ಲೇಖ:**
1. ಮುಖ್ಯೋಪಾಧ್ಯಾಯರು, ಸ.ಕಿ.ಪ್ರಾ.ಶಾಲೆ, ಗುರ್ಜಾಪೂರು, ತಾ॥ ಜಿ॥ ರಾಯಚೂರು ಇವರ ವರದಿ ದಿನಾಂಕ: 02.06.2004, 03.07.2004, 03.08.2004, 16.11.2004, 14.12.2004, 01.01.2005, 10.04.2007, 01.08.2007 ಮತ್ತು 30.10.2007.
2. ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಯಚೂರು ಇವರಿಂದ ನೀಡಿದ ನೋಟೀಸ್ ಸಂಖ್ಯೆ/ಎ5/ಇತರೆ/ಅನಧಿಕೃತ ಗೈರು ಹಾಜರಿ/05–06, ದಿನಾಂಕ: 30.06.2005, 03.08.2005, 28.12.2005, 23.04.2007 ಮತ್ತು 24.10.2007.
3. ಈ ಕಛೇರಿಯಿಂದ ಜಾರಿ ಮಾಡಲಾದ ನೋಟೀಸಿನ ಸಂಖ್ಯೆ/ಯೊವಿ1/ದೂರು/ಅ.ಗೈ.ಹಾ/18 2007–08, ದಿನಾಂಕ: 17.12.2007.
4. ಕರ್ನಾಟಕ ರಾಜ್ಯ ಪತ್ರ ದಿನಾಂಕ: 27.12.2007.

**ಪ್ರಸ್ತಾವನೆ:**

ಶ್ರೀಮತಿ ನಿವೇದಿತ ಸ.ಶಿ. ಸರ್ಕಾರಿ ಪ್ರಾ.ಶಾಲೆ, ಗುರ್ಜಾಪೂರು ತಾ॥ ಜಿ॥ ರಾಯಚೂರು ಇವರು ದಿನಾಂಕ: 02.06.2004 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು ಮೇಲಿನ ಉಲ್ಲೇಖ–1, 2 ಮತ್ತು 3ರ ಪ್ರಕಾರ ಇವರಿಗೆ ಹಲವು ಬಾರಿ ಕರ್ತವ್ಯಕ್ಕೆ ಹಾಜರಾಗಲು ತಿಳಿಸಿದ್ದರೂ ಸಹ ಇದುವರೆಗೂ ಕರ್ತವ್ಯಕ್ಕೆ ಹಾಜರಾಗಲಿಲ್ಲ ಮತ್ತು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿರುವ ಕಾರಣಕ್ಕೆ ಯಾವುದೇ ಸಮರ್ಥನೀಯವಾದ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಕೊನೆಗೆ

ಕರ್ನಾಟಕ ರಾಜ್ಯ ಪತ್ರ ದಿನಾಂಕ: 27.12.2007ರ ಪ್ರಕಾರ ಅಂತಿಮ ನೋಟೀಸ್ ಪ್ರಕಟಣೆ ಮಾಡಿ ಪ್ರಕಟವಾದ 15 ದಿವಸದೊಳಗಾಗಿ ಸೂಕ್ತ ದಾಖಲೆ ಸಲ್ಲಿಸಿ ಈ ಕಛೇರಿಯಿಂದ ಅನುಮತಿ ಪಡೆದು ಕರ್ತವ್ಯಕ್ಕೆ ಹಾಜರಾಗಲು ಅವಕಾಶ ನೀಡಿದ್ದರೂ ಸಹ ಇದುವರೆಗೆ ಕರ್ತವ್ಯಕ್ಕೆ ಹಾಜರಾಗದೇ ಇದ್ದುದರಿಂದ ಶ್ರೀಮತಿ ನಿವೇದಿತಾ ಸ.ಶಿ. ಸ.ಕಿ.ಪ್ರಾ.ಶಾಲೆ, ಗುರ್ಜಾಪೂರು, ತಾ॥ ಜಿ॥ ರಾಯಚೂರು ಇವರಿಗೆ ಸರ್ಕಾರಿ ಸೇವೆಯಲ್ಲಿ ಆಸಕ್ತಿ ಇಲ್ಲವೆಂದು ಪರಿಗಣಿಸಿ ಶ್ರೀಮತಿ ನಿವೇದಿತ ಸ.ಶಿ. ಸರ್ಕಾರಿ ಕಿ.ಪ್ರಾ.ಶಾಲೆ, ಗುರ್ಜಾಪೂರು ತಾ॥ ಜಿ॥ ರಾಯಚೂರು ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ/ಯೊವಿ1/ದೂರು/ಅಗೈಹಾ/18/2007–08, ದಿನಾಂಕ: 8ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶಿಸ್ತು ಪ್ರಾಧಿಕಾರಿ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಉಪ–ನಿರ್ದೇಶಕರಾದ ಶ್ರೀ ಬಸವರಾಜಪ್ಪ ಬಿ.ಸಿ. ಆದ ನಾನು ಶ್ರೀಮತಿ ನಿವೇದಿತಾ ಸ.ಶಿ. ಸ.ಕಿ.ಪ್ರಾ.ಶಾಲೆ, ಗುರ್ಜಾಪೂರು ತಾ॥ ಜಿ॥ ರಾಯಚೂರು ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 8(VIII) ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಿರುತ್ತೇನೆ.

**ಬಸವರಾಜಪ್ಪ ಬಿ.ಸಿ.**

ಪಿ.ಆರ್. 983 ಶಿಸ್ತು ಪ್ರಾಧಿಕಾರಿಗಳು ಮತ್ತು ಉಪ–ನಿರ್ದೇಶಕರು (ಆ) ಸಾ.ಶಿ.ಇ. ರಾಯಚೂರು.

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನ್ಯಾಯಾಲಯದಲ್ಲಿ**

**ವ್ಯಾಜ್ಯ ಸಂಖ್ಯೆ: ಎ(ಐ:ಎಂ):ಡಿಐಎಸ್/ಡಿ2/143/2008–09**

| **ಅರ್ಜಿದಾರರು** | **ಎದುರು ಅರ್ಜಿದಾರರು** |
|---|---|
| ವ್ಯವಸ್ಥಾಪಕ ನಿರ್ದೇಶಕರು, | ಶ್ರೀಮತಿ ಎಂ.ಪಿ. ಪಾಟೀಲ್ |
| ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಳ ನಿ., | ತಂದೆ ದಿ॥ ಪರಮಗೌಡ ಪಾಟೀಲ್, |
| ನಂ.3, ದಿವಾನ್ ಮಾಧವರಾವ್ ರಸ್ತೆ, ಬಸವನಗುಡಿ, | ನಂ. 53/3, 1ನೇ ಮಹಡಿ, ಪುಟ್ಟಣ್ಣ ರಸ್ತೆ, |
| ಬೆಂಗಳೂರು – 560004 | ಬಸವನಗುಡಿ, ಬೆಂಗಳೂರು–560004 |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103(2)ರನ್ವಯ ಎದುರು ಅರ್ಜಿದಾರ ಸ್ಥಿರಾಸ್ತಿಯನು ಮುಟ್ಟುಗೋಲು ಮಾಡಿಕೊಂಡ ಬಗ್ಗೆ ಸ್ಥಿರೀಕರಿಸುವ ಆದೇಶ**

ಮೇಲ್ಕಂಡ ಅರ್ಜಿದಾರರು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 70 ರಡಿ ಎದುರು ಅರ್ಜಿದಾರರ ವಿರುದ್ಧ ರೂ.8,61,887–00ಗಳ ಹಣ ವಸೂಲಾತಿಗೆ ದಾವಾ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ದಾಖಲಿಸಿರುತ್ತಾರೆ.

ಸದರಿ ವ್ಯಾಜ್ಯದ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರ ರೀತ್ಯಾ (ಐ.ಎ.) ಮಧ್ಯಂತರ ಅರ್ಜಿ ದಾಖಲಿಸಿ, ಎದುರು ಅರ್ಜಿದಾರರ ವಶದಲ್ಲಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಆದೇಶದ ಪೂರ್ವದಲ್ಲಿ ಜಪ್ತಿ ಮಾಡಿಕೊಂಡು ಆದೇಶ ನೀಡಲು ಕೋರಿರುತ್ತಾರೆ.

ಸದರಿ ವ್ಯಾಜ್ಯದ ಅರ್ಜಿಯ ಜೊತೆಗೆ ಅರ್ಜಿದಾರರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 103ರ ರೀತ್ಯಾ ಮಧ್ಯಂತರ (ಐ.ಎ.) ಅರ್ಜಿಯನ್ನು ದಾಖಲಿಸಿ ಎದುರು ಅರ್ಜಿದಾರರ ವಶದಲ್ಲಿರುವ ಚರ ಮತ್ತು ಸ್ಥಿರಾಸ್ತಿಯನ್ನು ಈ ನ್ಯಾಯಾಲಯದ ಆದೇಶದ ಪೂರ್ವ ಜಪ್ತಿ ಮಾಡಿಕೊಂಡು ಆದೇಶ ನೀಡಲು ಕೋರಿರುತ್ತಾರೆ.

ಅರ್ಜಿದಾರರು ದಾಖಲು ಮಾಡಿರುವ ಮಧ್ಯಂತರ ಪರಿಹಾರ ಅರ್ಜಿಯನ್ನು ವಿಚಾರಣೆಗೆ ಅಂಗೀಕರಿಸಿದೆ. ಎದುರು ಅರ್ಜಿದಾರರ ವಶದಲ್ಲಿರುವ ಮತ್ತು ಈ ಆದೇಶದ ಅನುಬಂಧದಲ್ಲಿ ತಿಳಿಸಿರುವ ಸ್ಥಿರಾಸ್ತಿಯನ್ನು ಈ ನ್ಯಾಯಾಲಯದಲ್ಲಿ ದಾಖಲು ಮಾಡಿರುವ ವ್ಯಾಜ್ಯದ ಅರ್ಜಿ ಇತ್ಯರ್ಥದ ಆದೇಶ ಪೂರ್ವದಲ್ಲಿ ಸದರಿ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ಜಪ್ತಿ ಮಾಡಿಕೊಂಡು ದಿನಾಂಕ: 06.05.2008 ರಂದು ಆದೇಶ ಹೊರಡಿಸಲಾಗಿತ್ತು. ಸದರಿ ಆದೇಶವನ್ನು ಎದುರು ಅರ್ಜಿದಾರರು ದಿನಾಂಕ: 31.05.2008 ರಂದು ಸ್ವೀಕರಿಸಿರುತ್ತಾರೆ. ಆದಾಗ್ಯೂ ಸಹ ಎದುರು ಅರ್ಜಿದಾರರ ಸ್ಥಿರಾಸ್ತಿಯನ್ನು ಜಪ್ತಿ ಮಾಡಿಕೊಂಡಿರುವುದಕ್ಕೆ ಅರ್ಜಿದಾರರ ವ್ಯಾಜ್ಯದ ಬೇಡಿಕೆ ಮೊತ್ತಕ್ಕೆ ಸರಿಸಮಾನವಾಗಿ ಸೂಕ್ತ ಭದ್ರತೆಯನ್ನು ಈ ನ್ಯಾಯಾಲಯಕ್ಕೆ 15 ದಿನಗಳ ಒಳಗಾಗಿ ಷರತ್ತಿನ ಪ್ರಕಾರ ಸಲ್ಲಿಸಲು ವಿಫಲರಾಗಿರುತ್ತಾರೆ. ಆದುದರಿಂದ ಲಭ್ಯವಿರುವ ದಾಖಲಾತಿಗಳ ಅನುಗುಣವಾಗಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ರೀತ್ಯಾ ದಿನಾಂಕ: 03.05.2008 ರಂದು ದಾಖಲಿಸಿರುವ ಮಧ್ಯಂತರ (ಐ.ಎ.) ಅರ್ಜಿಯನ್ನು ಪುರಸ್ಕರಿಸಿದೆ. ಅರ್ಜಿದಾರರ ಬೇಡಿಕೆ ಮೊತ್ತ ರೂ.8,61,887–00 ಗಳಿಗೆ

ಎದುರು ಅರ್ಜಿದಾರರ ವಶದಲ್ಲಿರುವ (ಅನುಬಂಧದಲ್ಲಿ ವಿವರಿಸಿರುವ) ಸ್ಥಿರಾಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡಿರುವುದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103(2)ರನ್ವಯ ಸ್ಥಿರೀಕರಿಸಿದೆ.

ಈ ಆದೇಶವನ್ನು ದಿನಾಂಕ:02.08.2008 ರಂದು ನನ್ನ ಸ್ವಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ)**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು – 560 052, ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: A(I&M) DIS / D-2 / 143 / 2008-09**

**ಸ್ಥಿರೀಕರಿಸಿರುವ ಆದೇಶಕ್ಕೆ ಅನುಬಂಧ**

**ಆಸ್ತಿಯ ವಿವರ**

ಹಾವೇರಿ ಜಿಲ್ಲಾ ನಗರ ವ್ಯಾಪ್ತಿಯಲ್ಲಿರುವ ಪ್ಲಾಟ್ ನಂಬರ್ 165, ಸರ್ವೆ ನಂ 23ರಲ್ಲಿರುವ ಒಂದು ಗುಂಟೆ 9.25 ಆಣೆ ಒಟ್ಟು 1718 ಚದರಡಿ ಇದ್ದು, ಅದರ ಪೈಕಿ 1200 ಚದರಡಿಯಲ್ಲಿ ಆರ್.ಸಿ.ಸಿ. ಮೇಲ್ಛಾವಣಿ ಒಳಗೊಂಡ ಕಟ್ಟಡವಿದ್ದು, ಉಳಿದ ಖಾಲಿ ಜಾಗದ ಚಕ್ಕುಬಂದಿ

| ಈ ಮೇಲ್ಕಂಡ ಆಸ್ತಿಯ ಚಕ್ಕುಬಂದಿ | |
|---|---|
| **ಪೂರ್ವಕ್ಕೆ** | ರಸ್ತೆ |
| **ಪಶ್ಚಿಮಕ್ಕೆ** | ಅಂಬಗೊಂಡಾರ ರವರ ಸ್ವತ್ತು |
| **ಉತ್ತರಕ್ಕೆ** | ಹನುಮಾಪುರ ರವರ ಸ್ವತ್ತು |
| **ದಕ್ಷಿಣಕ್ಕೆ** | ಹುಗಾರ ರವರ ಸ್ವತ್ತು |

ಸ್ವತ್ತಿನ ಅಂದಾಜು ಮೌಲ್ಯ ಸುಮಾರು ರೂ.9,00,000–00 ಗಳಾಗುತ್ತದೆ.

ಪಿ.ಆರ್. 987 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ)

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು – 560 018**

**ಕ್ರ.ಸಂ.ಜೆಆರ್‌ಬಿ:ಸಮಾಪನೆ:106:2007–08, ದಿನಾಂಕ: 14ನೇ ಆಗಸ್ಟ್ 2008**

**ವಿಷಯ:** ಸ್ಥಗಿತಗೊಂಡಿರುವ ಹರಪನಹಳ್ಳಿ ತಾಲ್ಲೂಕು ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ., ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ ರವರ ಪತ್ರ ಸಂ:ಡಿಆರ್‌ಡಿವಿಜಿ/ಸಮಾಪನೆ/ಸಿಆರ್–28/2001–02, ದಿನಾಂಕ: 24.05.2005.
2. ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳುವ ನೋಟೀಸು ದಿನಾಂಕ: 23.01.08.
3. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ ರವರ ಪತ್ರ ಸಂ:ಡಿಆರ್‌ಡಿವಿಜಿ/ಸಮಾಪನೆ/ಸಿಆರ್–28/2001–02, ದಿನಾಂಕ: 25.07.2008.

**ಪ್ರಸ್ತಾವನೆ:**

ಹರಪನಹಳ್ಳಿ ತಾಲ್ಲೂಕು ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ., ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಈ ಸಹಕಾರ ಸಂಘವು ಸಹಕಾರ ಸಂಘಗಳ ಉಪನಿಬಂಧಕರು, ಬಳ್ಳಾರಿ ಜಿಲ್ಲೆ, ಇವರಲ್ಲಿ ಸಂಖ್ಯೆ: ಡಿಆರ್‌ಡಿ/961/66–67, ದಿನಾಂಕ: 09.02.66 ರಂದು ನೋಂದಣಿಯಾಗಿರುತ್ತದೆ. ಈ ಸಂಘವು ಅನೇಕ ವರ್ಷಗಳಿಂದ ಯಾವುದೇ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದು, ದಿನಾಂಕ:31.03.1999 ರ ಅಂತ್ಯಕ್ಕೆ ಸಂಘವು ರೂ.11,379–50 ಗಳ ನಿವ್ವಳ ನಷ್ಟವನ್ನು ಹೊಂದಿದ್ದು, 1992–93 ಮತ್ತು 1998–99ನೇ ಸಾಲಿನ ಆಡಿಟ್ ವರದಿಗಳು ಲಭ್ಯವಿದ್ದರೂ ಸದರಿ ವರದಿಗಳಲ್ಲಿ ಆಡಳಿತ ಮಂಡಳಿ ಸದಸ್ಯರ ವಿವರಗಳು ಲಭ್ಯವಿಲ್ಲವೆಂದು ಇದರಿಂದ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಉಪಯೋಗವಿಲ್ಲದಿರುವುದರಿಂದ ಈ ಸಂಘವನ್ನು ಸಮಾಪನೆಗೊಳಿಸುವಂತೆ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ಇವರು ಉಲ್ಲೇಖ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಉಲ್ಲೇಖ (2)ರ ಈ ಕಛೇರಿಯ ಕಾರಣ ಕೇಳುವ ನೋಟೀಸುಗಳಿಗೆ ಉಲ್ಲೇಖ(3)ರ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಉಪನಿಬಂಧಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ಇವರಿಗೆ ಈ ಕಛೇರಿಯ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಿ, ಸ್ವೀಕೃತಿಯನ್ನು ಸಲ್ಲಿಸಲು ತಿಳಿಸಲಾಗಿ, ಸದರಿ ಸಹಾಯಕ ನಿಬಂಧಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ

ನಿರ್ದೇಶಕರು, ಹರಪನಹಳ್ಳಿ ಇವರ ಕಛೇರಿಯಲ್ಲಿ ಲಭ್ಯವಿರುವ ಲೆಕ್ಕಪರಿಶೋಧನಾ ವರದಿಯನ್ನು ಪರಿಶೀಲಿಸಿ ಸಂಘದ ಆಡಳಿತ ಮಂಡಳಿ ಸದಸ್ಯರ ಹೆಸರು ಮತ್ತು ವಿಳಾಸ ಲಭ್ಯವಿರುವುದಿಲ್ಲವೆಂದು ತಿಳಿಸಿ, ಜಾರಿಗಾರರ ವರದಿ ಮತ್ತು ಮಹಜರ್ ಇವುಗಳನ್ನು ನೋಟೀಸುಗಳೊಂದಿಗೆ ಹಿಂದಿರುಗಿಸಿರುವುದಾಗಿ ದಾವಣಗೆರೆ ಜಿಲ್ಲೆಯ ಉಪನಿಬಂಧಕರು ಈ ಕಛೇರಿಗೆ ಹಿಂದಿರುಗಿಸಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಮೇಲ್ಕಂಡ ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 ರನ್ವಯ ಸಮಾಪನೆಗೊಳಿಸಿ, ಕಲಂ 73 ರನ್ವಯ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ/69/ ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಹರಪನಹಳ್ಳಿ ತಾಲ್ಲೂಕು ಖಾದಿ ಗ್ರಾಮೋದ್ಯೋಗ ಸಹಕಾರ ಸಂಘ ನಿ., ಹರಪನಹಳ್ಳಿ, ಈ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು, ಸಂಘದ ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ, ಸಂಘದ ನೋಂದಣಿ ಸಂಖ್ಯೆ ರದ್ದತಿಗೆ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 14.08.2008 ರಂದು ಕಛೇರಿ ಮೊಹರು ಹಾಗೂ ಹಸ್ತಾಕ್ಷರದೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 988 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು – 560 018**

**ಕ್ರ.ಸಂ.ಜೆಆರ್‌ಬಿ:ಸಮಾಪನೆ:87:2007–08, ದಿನಾಂಕ: 14ನೇ ಆಗಸ್ಟ್ 2008**

**ವಿಷಯ:** ಸ್ಥಗಿತಗೊಂಡಿರುವ ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶೇಷಾದ್ರಿಪುರಂ, ಬೆಂಗಳೂರು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂ:ಡಿಆರ್‌ಬಿ–1/ಸಮಾಪನೆ/43/07–08, ದಿನಾಂಕ: 13.11.2007.
2. ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ:23.01.08 ರಂದು ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಇವರಿಗೆ ಹೆಚ್ಚುವರಿ ಮಾಹಿತಿ ಕೋರಿರುವ ಪತ್ರ.
3. ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂ:ಡಿಆರ್‌ಬಿ–1/ಸಮಾಪನೆ/43/07–08, ದಿನಾಂಕ: 20.03.08.
4. ಈ ಕಛೇರಿಯ ಕಾರಣ ಕೇಳುವ ನೋಟೀಸಿನ ಸಮಸಂಖ್ಯೆಯ ಪತ್ರದ ದಿನಾಂಕ: 23.06.08.
5. ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂ: ಡಿಆರ್‌ಬಿ–1/ಸಮಾಪನೆ/43/07–08, ದಿನಾಂಕ: 28.07.08.

**ಪ್ರಸ್ತಾವನೆ:**

ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶೇಷಾದ್ರಿಪುರಂ, ಬೆಂಗಳೂರು ಈ ಸಹಕಾರ ಸಂಘವನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಇವರ ಕಛೇರಿಯಲ್ಲಿ ಸಂಖ್ಯೆ: ಎಆರ್‌ಬಿ–2/ ಆರ್‌ಇಜಿಎನ್/ವಿಹೆಚ್‌ಬಿಸಿಎಸ್/1860/1970–71 ದಿನಾಂಕ:06.04.1971 ರಲ್ಲಿ ನೋಂದಣಿಯಾಗಿರುತ್ತದೆ. 2005–06ನೇ ಸಾಲಿನ ಸಹಕಾರ ಸಂಘಗಳ ಪಟ್ಟಿಯಲ್ಲಿ ಸದರಿ ಸಂಘವು ಸ್ಥಗಿತವಾಗಿರುವ ಬಗ್ಗೆ ನಮೂದಾಗಿದ್ದು, ನಂ.8, 2ನೇ ಮಹಡಿ, ನಾಗಪ್ಪ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು–20 ಈ ವಿಳಾಸಕ್ಕೆ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 1ನೇ ವಲಯ, ಬೆಂಗಳೂರು, ಇವರು ಭೇಟಿ ನೀಡಿದಾಗ ಅದು ಖಾಲಿ ನಿವೇಶನವಾಗಿದ್ದು, ಬಹಳ ಹಳೆಯದಾದ ಒಂದು ಷೆಡ್ ಮಾತ್ರ ಇರುತ್ತದೆಂದು ಅಕ್ಕ–ಪಕ್ಕದಲ್ಲಿ ವಾಸಿಸುತ್ತಿರುವ ನಿವಾಸಿಗಳನ್ನು ವಿಚಾರಿಸಲಾಗಿ, ಸದರಿ

ಸಂಘವು ಬಹಳ ವರ್ಷಗಳಿಂದ ಮುಚ್ಚಿರುವುದಾಗಿ ತಿಳಿಸಿರುತ್ತಾರೆಂದು ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರು ಉಲ್ಲೇಖ (1) ರಲ್ಲಿ ವರದಿಯನ್ನು ನೀಡಿರುತ್ತಾರೆ.

ಈ ಕಛೇರಿಯ ಉಲ್ಲೇಖ(2) ರ ಪತ್ರದಲ್ಲಿ ಉಪನಿಬಂಧಕರಿಗೆ ಹೆಚ್ಚುವರಿ ಮಾಹಿತಿ ಕೋರಲಾಗಿ ಸದರಿ ಮೇಲ್ಕಂಡ ವಿಳಾಸವು ಮಾದರಿ ಉಪನಿಯಮ ತಿದ್ದುಪಡಿ ವಿಳಾಸವಾಗಿದ್ದು, ಸಂಘದ ನೋಂದಣಿ ವಿಳಾಸವನ್ನು ಉಲ್ಲೇಖ (3) ರ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಕಛೇರಿಯಿಂದ ಉಲ್ಲೇಖ (4) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಸ್ವೀಕೃತಿಯನ್ನು ಕಳುಹಿಸುವಂತೆ ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರನ್ನು ಕೋರಲಾಗಿದೆ. ಸದರಿ ಉಪನಿಬಂಧಕರು ಉಲ್ಲೇಖ(5) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಕಛೇರಿಯ ಜಾರಿಗಾರರಿಗೆ ಸದರಿ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಲು ವಹಿಸಿದ್ದು, ಸದರಿ ಜಾರಿಗಾರರು ಸಂಘವು ಹಿಂದೆ ನೊಂದಣಿ ಸ್ಥಳದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿದಾಗ, ಸಂಘವು ಕಾರ್ಯನಿರ್ವಹಿಸುತ್ತಿದ್ದ ಕಛೇರಿ ಸ್ಥಳವನ್ನು ಕೆಡವಿಹಾಕಿದ್ದು, ಖಾಲಿ ಜಾಗ ಮಾಡಿ ಈ ಸ್ಥಳಕ್ಕೆ ದಪ್ಪವಾದ ಕಬ್ಬಿಣದ ಭೀಮ್‌ಗಳನ್ನು ನೆಟ್ಟು ತಂತಿ–ಬೇಲಿ ಹಾಕಿಸಿರುವುದಾಗಿ ಈ ಜಾಗದ ಸುತ್ತಮುತ್ತಲಿನ ನಿವಾಸಿಗಳನ್ನು ಸಂಘದ ಅಸ್ಥಿತ್ವದ ಬಗ್ಗೆ ಹಾಗೂ ಆಡಳಿತ ಮಂಡಳಿಯ ನಿರ್ದೇಶಕರ ವಿಳಾಸದ ಬಗ್ಗೆ ವಿಚಾರಿಸಲಾಗಿ ಯಾವುದೇ ಸುಳಿವು ಹಾಗೂ ಕುರುಹು ಸಹಾ ಲಭ್ಯವಾಗಿರುವುದಿಲ್ಲವೆಂದು ಈ ಕಾರಣದಿಂದ ಕರ್ನಾಟಕ ಸಹಕಾರ ಸಂಘಗಳ ನಿಯಮ 32 (3)(ಡಿ)ರ ಪ್ರಕಾರ ಸಂಘವು ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಟ್ಟಡದ ಜಾಗದಲ್ಲಿ ಖಾಲಿ ಇರುವ ಜಾಗಕ್ಕೆ ತಂತಿಬೇಲಿ ಹಾಕಿರುವ ಕಬ್ಬಿಣದ ಭೀಮ್ ಮೇಲೆ ಕಾರಣ ಕೇಳುವ ನೋಟೀಸನ್ನು ಅಂಟಿಸಿ ಮಹಜರ್ ಮಾಡಿ ವರದಿಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ಮಹಜರ್ ಮಾಡಿದ ಪ್ರತಿ ಮತ್ತು ತಂತಿಬೇಲಿ ಹಾಕಿರುವ ಕಬ್ಬಿಣದ ಭೀಮ್ ಮೇಲೆ ಕಾರಣ ಕೇಳುವ ನೋಟೀಸನ್ನು ಅಂಟಿಸಿರುವ ಫೋಟೋ ಕಾಪಿಯ ಪ್ರತಿಯನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ಇವರ ವರದಿಯ ಮೇರೆಗೆ, ಸದರಿ ಸಂಘವು ಅಸ್ಥಿತ್ವದಲ್ಲಿಲ್ಲವೆಂದು ತಿಳಿಸಿರುವುದರಿಂದ ಹಾಗೂ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದಿರುವುದರಿಂದ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರನ್ವಯ ಸಮಾಪನೆಗೊಳಿಸಿ ಕಲಂ 73 ರನ್ವಯ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಶೇಷಾದ್ರಿಪುರಂ, ಬೆಂಗಳೂರು, ಈ ಸಂಘವನ್ನು ಸಮಾಪನೆಗೊಳಿಸಿ, ಶ್ರೀ ಹೆಚ್.ಎಂ. ಅಪಾಜೀಗೌಡ, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ಉಪನಿಬಂಧಕರು–1 ರವರ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು, ಸಂಘದ ಆಸ್ತಿ–ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ, ಸಂಘದ ನೋಂದಣಿ ಸಂಖ್ಯೆ ರದ್ದತಿಗೆ 90 (ತೊಂಭತ್ತು) ದಿನಗಳೊಳಗಾಗಿ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 14.08.2008 ರಂದು ಕಛೇರಿ ಮೊಹರು ಹಾಗೂ ಸ್ವಹಸ್ತಾಕ್ಷರದೊಂದಿಗೆ ಹೊರಡಿಸಲಾಗಿದೆ.

ಪಿ.ಆರ್. 989 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ : ಎಲ್ಎನ್‌ಡಿ [ಎನ್.ಎ] ಸಿಆರ್ 122/2007–08, ದಿನಾಂಕ: 27ನೇ ಜೂನ್ 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ : 136ರಲ್ಲಿ 0–17 ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ : ಆರ್‌ಡಿ 292 ಎಲ್‌ಜಿಬಿ 2008, ದಿನಾಂಕ:29.5.2008.
2. ತಹಸೀಲ್ದಾರ್‌ರವರ ವರದಿ ಸಂಖ್ಯೆ : ಎಲ್ಎನ್‌ಡಿ [ಎನ್.ಎ.] ಸಿಆರ್ 103/2007–08, ದಿನಾಂಕ:22.6.2007.

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ : 136ರಲ್ಲಿ 0–17 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕಾಗಿ ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ [2]ರಲ್ಲಿ ಸಲ್ಲಿಸಿದ್ದ ವರದಿಯಂತೆ ಸೊಣ್ಣೇನಹಳ್ಳಿ ಗ್ರಾಮಕ್ಕೆ ಸ್ಮಶಾನದ ಅಗತ್ಯವಿರುವುದಾಗಿಯೂ ಈ ಜಮೀನಿನಲ್ಲಿ ಸರ್ಕಾರಕ್ಕೆ ಕಾಯ್ದಿರಿಸತಕ್ಕ ಐಟಂಗಳು ಯಾವುದೂ ಇಲ್ಲವೆಂದು ಈ ಜಮೀನನ್ನು ಸ್ಮಶಾನಕ್ಕೆ ಮೀಸಲಿಡುವಲ್ಲಿ ಗ್ರಾಮಸ್ಥರ ತಂಟೆ ತಕರಾರು ಇಲ್ಲವೆಂದು ತಿಳಿಸಿ ಜಮೀನನ್ನು ಸಾರ್ವಜನಿಕರ ಸ್ಮಶಾನಕ್ಕೆ ಕಾಯ್ದಿರಿಸುವಂತೆ ಕೋರಿದ್ದರು.

ತಹಶೀಲ್ದಾರ್‌ರವರ ವರದಿಯಂತೆ ಮೇಲ್ಕಂಡ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ : 136ರಲ್ಲಿನ 0–17 ಗುಂಟೆ ಜಮೀನನ್ನು ಸೊಣ್ಣೇನಹಳ್ಳಿ ಗ್ರಾಮಸ್ಥರ ಸಾರ್ವಜನಿಕ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1969ರ ಕಲಂ 71ರಡಿ ಕಾಯ್ದಿರಿಸುವ ಬಗ್ಗೆ ಈ ಕಛೇರಿಯಿಂದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಸರ್ಕಾರವು ಉಲ್ಲೇಖ [1]ರ ಆದೇಶದಲ್ಲಿ ಮೇಲ್ಕಂಡ ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ : 136ರಲ್ಲಿನ 0–17 ಗುಂಟೆ ಜಮೀನನ್ನು ಸಾರ್ವಜನಿಕರ ಸ್ಮಶಾನದ ಉದ್ದೇಶಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಕಾಯ್ದಿರಿಸಲು ಪೂರ್ವಾನುಮೋದನೆ ನೀಡಿದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಹೆಸರಘಟ್ಟ ಹೋಬಳಿ, ಸೊಣ್ಣೇನಹಳ್ಳಿ ಗ್ರಾಮದ ಸರ್ವೆ ನಂ : 136ರಲ್ಲಿನ 0–17 ಗುಂಟೆ ಜಮೀನನ್ನು ಸ್ಮಶಾನದ ಉದ್ದೇಶಕ್ಕಾಗಿ ಗೋಮಾಳ ಶೀರ್ಷಿಕೆಯಿಂದ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 97[4]ರನ್ವಯ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಕಾಯ್ದಿರಿಸಲಾಗಿದೆ ಮತ್ತು ಸ್ಮಶಾನದ ನಿರ್ವಹಣೆ / ಉಸ್ತುವಾರಿಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯು ನಿರ್ವಹಿಸಲು ಆದೇಶಿಸಿದೆ.

**ಷರತ್ತುಗಳು**

1. ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತ ಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕುರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2. ಸದರಿ ಸ್ಮಶಾನವನ್ನು ಎಲ್ಲಾ ಜನಾಂಗದ ದಹನ ಕ್ರಿಯೆಗೆ ಉಪಯೋಗಿಸತಕ್ಕದ್ದು.
3. ಗ್ರಾಮ ಪಂಚಾಯಿತಿಯವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್‌ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
4. ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
5. ತಹಶೀಲ್ದಾರ್, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಬೆಂಗಳೂರುರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ಪಿ.ಆರ್. 990 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ಸಂಖ್ಯೆ: ಯುಬಿಸಿ–3/54/ಸಮಾಪನೆ/2008–09, ದಿನಾಂಕ: 20ನೇ ಆಗಸ್ಟ್ 2008**

**ವಿಷಯ:** ಧಾರವಾಡ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹುಬ್ಬಳ್ಳಿ ಇದರ ಸಮಾಪನಾ ಆದೇಶವನ್ನು ರದ್ದುಪಡಿಸಿ ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶ ಸಂಖ್ಯೆ: ಯುಬಿಸಿ/ಆರ್ ಬಿ ಐ/49/92–93 ದಿ: 30.08.1994.
2. ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಜಿಲ್ಲೆ ಇವರ ಪತ್ರ ಸಂಖ್ಯೆ:ಡಿಐಜಡ್/ಆರ್ ಎಸ್ ಆರ್/ಸಿಆರ್/08–09, ದಿನಾಂಕ: 5.5.2008.
3. ದಿ: 11.6.2008 ರಂದು ಈ ಕಛೇರಿಯಲ್ಲಿ ನಡೆದ ಸಮಾಪನಾಧಿಕಾರಿಗಳ ಸಭೆಯ ನಿರ್ಣಯ
4. ಬ್ಯಾಂಕಿನ ಸಮಾಪನಾಧಿಕಾರಿಗಳ ಪತ್ರ ದಿ: 5.7.2008.
5. ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಜಿಲ್ಲೆ ಇವರ ಪತ್ರ ಸಂಖ್ಯೆ:ಡಿಆರ್‌ಜಡ್/ಡಿ/ಆರ್ ಎಸ್ ಆರ್/08–09 ದಿ: 16.08.2008.

ಧಾರವಾಡ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಬ್ಯಾಂಕ್ ಲಿ, ಹುಬ್ಬಳ್ಳಿ ಇದನ್ನು ಶಕ್ತ ಬ್ಯಾಂಕಾಗಿ ಪರಿಗಣಿಸಲು ನಿಗದಿಪಡಿಸಿರುವ ಗುರಿಯನ್ನು ತಲುಪದೆ ಇರುವುದರಿಂದ ಭಾರತೀಯ ರಿಸರ್ವ್ ಬ್ಯಾಂಕಿನ ಒಪ್ಪಿಗೆಯೊಂದಿಗೆ ಉಲ್ಲೇಖ (1) ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲಾಗಿತ್ತು.

ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಜಿಲ್ಲೆ ಇವರು ಉಲ್ಲೇಖ (2) ರ ಪತ್ರದಲ್ಲಿ ಬ್ಯಾಂಕಿನ ಸಮಾಪನಾ ಆದೇಶವನ್ನು ರದ್ದುಪಡಿಸಿ ಸಹಕಾರ ಸಂಘವನ್ನಾಗಿ ಪರಿವರ್ತಿಸುವಂತೆ ಕೋರಿದ್ದಾರೆ. ದಿ: 10.03.2008 ರಂದು ನಡೆದ ಬ್ಯಾಂಕಿನ ಸರ್ವ ಸದಸ್ಯರ ಸಭೆಯಲ್ಲಿ ಸಮಾಪನಾ ಆದೇಶ ರದ್ದುಪಡಿಸಿ, ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಲು ಆದೇಶ ನೀಡುವಂತೆ ಸಂಬಂಧಪಟ್ಟ ಅಧಿಕಾರಿಗಳನ್ನು ಕೋರಲು ತೀರ್ಮಾನಿಸಿದ್ದಾರೆ. ಬ್ಯಾಂಕು ಸ್ವಂತ ಕಟ್ಟಡ ಹೊಂದಿದ್ದು, ರೂ.1.36 ಲಕ್ಷಗಳ ಠೇವಣಿಯನ್ನು ಮಾತ್ರ ಪಾವತಿಸಲು ಬಾಕಿ ಇದ್ದು, ಅದನ್ನು ಠೇವಣಿದಾರರಿಗೆ ಕೂಡಲೇ ಪಾವತಿಸಲಾಗುವುದೆಂದು ಸಮಾಪನಾಧಿಕಾರಿಗಳು ತಿಳಿಸಿದ್ದು ಈ ಸಂಸ್ಥೆಯನ್ನು ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಿದಲ್ಲಿ, ಸಶಕ್ತ ಸಂಘವಾಗಿ ಮುಂದುವರೆಯುವ ಸಾಧ್ಯತೆ ಇರುವುದಾಗಿ ಸಹಕಾರ ಸಂಘಗಳ ಉಪ ನಿಬಂಧಕರು ತಿಳಿಸಿದ್ದಾರೆ.

ದಿ: 11.6.2008 ರಂದು ಈ ಕಛೇರಿಯಲ್ಲಿ ನಡೆದ ಸಮಾಪನೆಯಲ್ಲಿರುವ ಪಟ್ಟಣ ಸಹಕಾರ ಬ್ಯಾಂಕುಗಳ ಸಭೆಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಉಪ ಪ್ರಧಾನ ವ್ಯವಸ್ಥಾಪಕರು ಈ ಬ್ಯಾಂಕನ್ನು ಪತ್ತಿನ ಸಹಕಾರ ಸಂಘವನ್ನಾಗಿ ಪರಿವರ್ತಿಸಬೇಕಾದಲ್ಲಿ ಡೆಪೋಸಿಟ್ ಇನ್ಸೂರೆನ್ಸ್ ಮತ್ತು ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್‌ನಿಂದ ಪಡೆದಿರುವ ಠೇವಣಿ ಮೊತ್ತವನ್ನು ಹಿಂತಿರುಗಿಸುವಂತೆ ತಿಳಿಸಿದ್ದು ಸಮಾಪನಾಧಿಕಾರಿಯವರು ಡಿ.ಐ.ಸಿ.ಜಿ.ಸಿ. ಯಿಂದ ಪಡೆದಿರುವ ಮೊತ್ತ ರೂ.9,15,792–00 ಗಳನ್ನು ಡಿ.ಡಿ. ಸಂಖ್ಯೆ: 250696 ದಿ: 5.7.2008ರ ಮುಖಾಂತರ ಹಿಂತಿರುಗಿಸಿದ್ದಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಧಾರವಾಡ ಜಿಲ್ಲೆ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರಲ್ಲಿ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ದತ್ತವಾದ ಅಧಿಕಾರದಂತೆ ಧಾರವಾಡ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹುಬ್ಬಳ್ಳಿ ಇದರ ಉಲ್ಲೇಖ (1) ರಲ್ಲಿ ಹೊರಡಿಸಲಾಗಿದ್ದ ಸಮಾಪನಾ ಆದೇಶವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ರದ್ದುಪಡಿಸಲಾಗಿದೆ.

**ಷರತ್ತು:**

1) ಸದಸ್ಯೇತರರ ಠೇವಣಿ ಇದ್ದಲ್ಲಿ ಸದರಿ ಠೇವಣಿಯನ್ನು ಹಿಂತಿರುಗಿಸತಕ್ಕದ್ದು. ಇಲ್ಲವೇ ಎಲ್ಲಾ ಸದಸ್ಯೇತರ ಠೇವಣಿದಾರರನ್ನು ಸದಸ್ಯರನ್ನಾಗಿ ಮಾಡಿಕೊಳ್ಳತಕ್ಕದ್ದು.

ಬ್ಯಾಂಕಿನ ಸಮಾಪನಾಧಿಕಾರಿಗಳು ಹಿಂದಿನ ಆಡಳಿತ ಮಂಡಳಿಗೆ ಕೋರಂ ಆಗುವಷ್ಟು (ಸಮಾಪನಾ ಪೂರ್ವದಲ್ಲಿದ್ದ ಆಡಳಿತ ಮಂಡಳಿಯ ಸದಸ್ಯರ ಸಂಖ್ಯೆಯ ಶೇ.50ಕ್ಕಿಂತ ಒಂದು ಸಂಖ್ಯೆ ಹೆಚ್ಚಿನ) ಸದಸ್ಯರಿದ್ದಲ್ಲಿ ಬ್ಯಾಂಕಿನ ಪ್ರಭಾರವನ್ನು ಕೂಡಲೇ ವಹಿಸಿಕೊಡಲು ಆದೇಶಿಸಿದೆ. ಒಂದು ವೇಳೆ ಅದು ಸಾಧ್ಯವಿಲ್ಲದಿದ್ದ ಪಕ್ಷದಲ್ಲಿ ಒಂದು ತಿಂಗಳೊಳಗಾಗಿ ಹೊಸದಾಗಿ ಚುನಾವಣೆಯನ್ನು ನಡೆಸಿ ನೂತನ ಆಡಳಿತಮಂಡಳಿಗೆ ಬ್ಯಾಂಕಿನ ಪ್ರಭಾರವನ್ನು ವಹಿಸಿಕೊಡಲು ಸೂಚಿಸಿದೆ. ಅಲ್ಲಿಯವರೆಗೆ ಬ್ಯಾಂಕಿನ ಉಸ್ತುವಾರಿಯನ್ನು ಈಗಿನ ಸಮಾಪನಾಧಿಕಾರಿಯಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಲೇವಾದೇವಿ) ಹುಬ್ಬಳ್ಳಿ ಇವರು ವಹಿಸಿಕೊಳ್ಳತಕ್ಕದ್ದು ಹಾಗೂ ಇವರು ಯಾವುದೇ ರೀತಿಯ ನಿರ್ಣಯ ಕೈಗೊಳ್ಳತಕ್ಕದ್ದಲ್ಲ ಅಲ್ಲದೆ ಇವರು ನ್ಯಾಯಾಲಯಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಹೊರತುಪಡಿಸಿ ಯಾವುದೇ ವ್ಯವಹಾರಗಳನ್ನು ನಡೆಸತಕ್ಕದ್ದಲ್ಲ.

ಪ್ರಭಾರ ವಹಿಸಿಕೊಂಡ ಆಡಳಿತ ಮಂಡಳಿಯು 45 ದಿನದೊಳಗಾಗಿ ಸರ್ವ ಸದಸ್ಯರ ಸಭೆಯನ್ನು ಕರೆದು ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಿ ಕಾರ್ಯನಿರ್ವಹಿಸಲು ಸಮಗ್ರ ಉಪ ನಿಯಮಗಳನ್ನು ರೂಪಿಸಿ ತಿದ್ದುಪಡಿ ಮಾಡಿ ಇಲಾಖಾ ಅನುಮೋದನೆ ಪಡೆಯಲು ಅಗತ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ ಈ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿ: 20.08.2008 ರಂದು ಹೊರಡಿಸಿದೆ.

ಪಿ.ಆರ್. 1007 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/257/ಡಿಟಿಸಿಆರ್/2004–05, ದಿನಾಂಕ: 9ನೇ ಸೆಪ್ಟೆಂಬರ್ 2008**

**ಉಪಸ್ಥಿತರು** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ,
ಕುಲಶೇಖರ ಕೈಕಂಬ, ಮಂಗಳೂರು.

**ಆರೋಪಿಗಳು:**

1. ಜನಾರ್ಧನ, (32 ವ), ಬಿನ್: ವಟ್ಟು ಗೌಡ,
   ವಾಸ: ಮಡಪಾಡಿ, ತೆಂಕ ಎಡಪದವು ಗ್ರಾಮ, ಮಂಗಳೂರು.
2. ಮೋಹನ (23 ವ), ಬಿನ್: ಮುಂಡಪ್ಪ ಶೆಟ್ಟಿ,
   ವಾಸ: ಪಾಲೆಮಾರ್, ಕೋಣಾಜೆ ಗ್ರಾಮ, ಮಂಗಳೂರು.
3. ರಾಜೇಶ್ (25 ವ), ಬಿನ್: ವಾಸುದೇವ ದೇವಾಡಿಗ,
   ವಾಸ: ಕಾವೂರು ಮುಲ್ಲಕಾಡು ಭಜನಾ ಮಂದಿರ ಬಳಿ,
   ಮಂಗಳೂರು.

**ವಾಹನ ಮಾಲೀಕರು:**

1. ಶ್ರೀ ಕೆ. ಮುರಳೀಧರ್ ಬಿನ್: ಕೃಷ್ಣ ಮೂರ್ತಿ,
   ನಂ.1238, 25ನೇ ಮುಖ್ಯರಸ್ತೆ, 9ನೇ ಬ್ಲಾಕ್, ಜಯನಗರ,
   ಬೆಂಗಳೂರು–69. (ಮಾರುತಿ–800 ಕಾರಿನ ಮಾಲೀಕರು)
2. ಶ್ರೀ ಮೋಹನ್ ದಾಸ್ ಶೆಟ್ಟಿ ಬಿನ್: ದಿ. ಮುಂಡಪ್ಪ ಶೆಟ್ಟಿ,
   ಪಾಲೆಮಾರು ಹೌಸ್, ಕೋಣಾಜೆ ಅಂಚೆ, ಮಂಗಳೂರು,
   (ಮೋಟಾರು ಸೈಕಲ್‌ನ ಮಾಲೀಕರು)

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಕುಲಶೇಖರ ಕೈಕಂಬ, ಮಂಗಳೂರು ಠಾಣೆ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯವರೊಂದಿಗೆ ಮತ್ತು ರೌಡಿ ನಿಗ್ರಹದಳದ ಸಿಬ್ಬಂದಿಯವರನ್ನು ಕೂಡಿಕೊಂಡು ದಿ:11.1.05 ರಂದು ಮಂಗಳೂರು ನಗರದ ಮರೋಳಿ ಗ್ರಾಮದ ಪ್ರೇಮ ನಗರ ಎಂಬಲ್ಲಿ ರತ್ನಾಕರ ದೇವಾಡಿಗ ಎಂಬವರ ಬಾಬ್ತು ಮನೆಗೆ ದಾಳಿ ನಡೆಸಿದಾಗ ಮನೆಯ ಒಳಗಿನ ಕೋಣೆಯಲ್ಲಿ ಮೂವರು ಯುವಕರು ಸೇರಿಕೊಂಡು ಉಪಯೋಗಿಸಲಾದ ಖಾಲಿ ಶರಾಬು ತೊಟ್ಟೆಗಳಿಗೆ ನಕಲಿ ಶರಾಬನ್ನು ತುಂಬಿಸಿಕೊಂಡು ಪಂಚಿಂಗ್ ಮೆಶಿನ್ ಮೂಲಕ ಸೀಲ್ ಮಾಡಿ ಅಕ್ರಮವಾಗಿ ನಕಲಿ ತೊಟ್ಟೆ ಸಾರಾಯಿಯನ್ನು ತಯಾರಿಸುತ್ತಿರುವುದು ಕಂಡು ಬಂತು. ಸದರಿ ಮೂವರು ಯುವಕರಲ್ಲಿ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಜನಾರ್ಧನ, (32 ವ), ಬಿನ್: ವಟ್ಟು ಗೌಡ, ವಾಸ: ಮಡಪಾಡಿ, ತೆಂಕ ಎಡಪದವು ಗ್ರಾಮ, ಮಂಗಳೂರು ಮತ್ತು ಮೋಹನ (23 ವ), ಬಿನ್: ಮುಂಡಪ್ಪ ಶೆಟ್ಟಿ, ವಾಸ: ಪಾಲೆಮಾರ್ ಕೋಣಾಜೆ ಗ್ರಾಮ, ಮಂಗಳೂರು ಹಾಗೂ ರಾಜೇಶ್ (25 ವ), ಬಿನ್: ವಾಸುದೇವ ದೇವಾಡಿಗ, ವಾಸ: ಕಾವೂರು ಮುಲ್ಲಕಾಡು ಭಜನಾ ಮಂದಿರ ಬಳಿ, ಮಂಗಳೂರು ಎಂದು ತಿಳಿಸಿರುತ್ತಾರೆ. ಅವರು ಕಾಳಸಂತೆಯಲ್ಲಿ ಸ್ಪಿರಿಟ್‌ನ್ನು ಖರೀದಿಸಿ ಅದನ್ನು ತಂದು ದಾಸ್ತಾನಿರಿಸಿ ಸಾರಾಯಿ ಅಂಗಡಿಗಳಿಂದ ಉಪಯೋಗಿಸಿದ ಸರಕಾರಿ ಖಾಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಂದು ಸ್ಪಿರಿಟ್‌ನಿಂದ ನಕಲಿ ಸಾರಾಯಿಯನ್ನು ತಯಾರಿಸಿ ತೊಟ್ಟೆಗಳಿಗೆ ತುಂಬಿಸಿ ಪಂಚಿಂಗ್ ಮೆಷಿನ್‌ನಿಂದ ಸೀಲ್ ಮಾಡಿ ಮಾರಾಟ ಮಾಡಿರುವುದಾಗಿ ಹಾಗೂ ಹೊರಗಡೆ ನಿಲ್ಲಿಸಿದ ಮಾರುತಿ ಕಾರು ಹಾಗೂ ಮೋಟಾರು ಸೈಕಲ್‌ನ್ನು ಅಕ್ರಮ ದಂಧೆಗೆ ಉಪಯೋಗಿಸಿರುವುದಾಗಿ ನುಡಿದಿರುತ್ತಾರೆ. ಸದರಿ ಕೋಣೆಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಈ ಕೆಳಕಂಡ ಸೊತ್ತುಗಳು ಕಂಡು ಬಂದಿರುತ್ತದೆ.

1) ಸುಮಾರು 35 ಲೀಟರ್ ಗಾತ್ರದ ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು–2
2) ಸುಮಾರು 35 ಲೀಟರ್ ಗಾತ್ರದ ಸ್ಪಿರಿಟ್ ತುಂಬಿರುವ 5 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 175 ಲೀಟರ್ ಮದ್ಯಸಾರ.
3) ಉಪಯೋಗಿಸಿದ ಸರಕಾರಿ ಖಾಲಿ ಶರಾಬು ತೊಟ್ಟೆಗಳು – 1 ಗೋಣಿ ಚೀಲದಲ್ಲಿ
4) ನಕಲಿ ಸಾರಾಯಿ ತುಂಬಿರುವ ತಲಾ ಸುಮಾರು 100 ಎಂ.ಎಲ್. ನ 250 ಸಾರಾಯಿ ಸ್ಯಾಚೆಟ್‌ಗಳಲ್ಲಿ ಸುಮಾರು – 25 ಲೀಟರ್ ನಕಲಿ ಸಾರಾಯಿ.
5) ನೀಲಿ ಬಣ್ಣದ ಪ್ಲಾಸ್ಟಿಕ್ ಟ್ರೇಗಳು – 2
6) ಪಂಚಿಂಗ್ ಮೆಶಿನ್ – 1

ಮೇಲ್ಕಂಡ ಸೊತ್ತುಗಳ ಪೈಕಿ ಕ್ರಮ ಸಂಖ್ಯೆ:2 ರಲ್ಲಿರುವ ಮದ್ಯಸಾರದಿಂದ ಮಾದರಿಗಾಗಿ ಪ್ರತಿ ಕ್ಯಾನ್‌ನಿಂದ 750 ಎಂ.ಎಲ್. ನ ಸ್ಪಿರಿಟ್‌ನ್ನು ತೆಗೆದು ಬಾಟಲ್‌ಗಳಲ್ಲಿ ತುಂಬಿಸಿ ಮುಚ್ಚಳ ಭಾಗಕ್ಕೆ ಬಿಳಿ ಬಟ್ಟೆ ಕಟ್ಟಿ ಎಸ್.ಹೆಚ್.ಓ. ಅರಗು ಸೀಲ್ ಹಾಕಿ ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿ, ಅವುಗಳಿಗೆ ಕ್ರಮವಾಗಿ ಎ.ಬಿ.ಸಿ.ಡಿ.ಇ. ಎಂಬ ನಿಶಾನೆಯನ್ನು

ಕೊಡಲಾಯಿತು. ಅಂತೆಯೇ ಸ್ಪಿರಿಟ್ ತುಂಬಿದ ಕ್ಯಾನ್‌ಗಳ ಮುಚ್ಚಳ ಭಾಗಕ್ಕೆ ಬಿಳಿ ಬಟ್ಟೆ ಸುತ್ತಿ ಎಸ್.ಹೆಚ್.ಓ. ಅರಗು ಸೀಲ್ ಹಾಕಿ ಪಂಚರ ಸಹಿ ಹಾಗೂ ನಿಶಾನೆಯನ್ನು ಕೊಡಲಾಯಿತು.

ಸದರಿ ಮನೆಯ ಎದುರಿನ ಅಂಗಳದಲ್ಲಿ ನಿಲ್ಲಿಸಿದ ಮಾರುತಿ ಕಾರನ್ನು ಅಜಮಾಯಿಸಿ ನೋಡಲಾಗಿ, ಇದರ ನೋಂದಣಿ ಸಂಖ್ಯೆ: ಕೆಎ–09–ಎಂ–3015 ಆಗಿದ್ದು, ಇದು ಬಿಳಿ ಬಣ್ಣದ ಮಾರುತಿ 800 ಕಾರು ಆಗಿರುತ್ತದೆ. ಸದರಿ ಕಾರಿನ ಹಿಂಬದಿಯ ಸೀಟಿನಲ್ಲಿ ತಲಾ ಸುಮಾರು 35 ಲೀಟರ್ ಸ್ಪಿರಿಟ್ ತುಂಬಿರುವ 2 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಸುಮಾರು 70 ಲೀಟರ್ ಮದ್ಯಸಾರ ಇರುವುದು ಕಂಡು ಬಂತು. ಇದರ ಹತ್ತಿರದಲ್ಲಿಯೇ ಮೋಟಾರು ಸೈಕಲ್ ಇದರ ನೋಂದಣಿ ಸಂಖ್ಯೆ: ಕೆಎ–19–ಇ–697 ಆಗಿದ್ದು, ಇದು ಬಜಾಜ್ ಕವಸಾಕಿ ಮೋಟಾರು ಸೈಕಲ್ ಆಗಿರುತ್ತದೆ. ಅಕ್ರಮವಾಗಿ ನಕಲಿ ಸಾರಾಯಿ ತೊಟ್ಟೆಯನ್ನು ತಯಾರಿಸಿ ತಕ್ಷೀರಿನಲ್ಲಿದ್ದ ಆರೋಪಿಗಳಾದ ಜನಾರ್ಧನ, ಮೋಹನ್, ರಾಜೇಶ್ ಇವರುಗಳು ಮೂಡಬಿದ್ರೆ ನಿವಾಸಿ ಸತೀಶ್ ಎಂಬುವರಿಗೆ ಕಡಿಮೆ ಬೆಲೆಗೆ ಮಾರಾಟ ಮಾಡಿರುವುದಾಗಿ, ಸದರಿ ಸತೀಶ್ ಎಂಬಾತನು ಅವುಗಳನ್ನು ಸ್ವಲ್ಪ ಅಧಿಕ ಬೆಲೆಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ನಂತರ ಸದರಿ ಆರೋಪಿಗಳಲ್ಲಿ ಮತ್ತು ಸತೀಶ್ ಎಂಬುವರು ಯಾವುದೇ ಪರವಾನಿಗೆಯಿಲ್ಲದೆ ಅಕ್ರಮವಾಗಿ ಸ್ಪಿರಿಟ್‌ನ್ನು ದಾಸ್ತಾನು ಹೊಂದಿ ನಕಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸಿ ಮಾರಾಟ ಮಾಡಿರುವುದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34 ರೀತ್ಯಾ ಶಿಕ್ಷಾರ್ಹ ಹಾಗೂ ಅಪರಾಧವಾಗಿರುವುದರಿಂದ ಸೊತ್ತುಗಳನ್ನು ಹಾಗೂ ವಾಹನಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಮತ್ತು ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ: 12/2005 ರಂತೆ ಪ್ರಕರಣವನ್ನು ದಾಖಲಿಸಿ ಪ್ರಥಮ ಮಾಹಿತಿ ವರದಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಕುಲಶೇಖರ ಕೈಕಂಬ, ಮಂಗಳೂರು ಇವರು ದಾಖಲಿಸಿದ ಮೊಕದ್ದಮೆಯ ದಾಖಲಾತಿಗಳನ್ನು ಹಾಗೂ ಸೊತ್ತುಗಳನ್ನು ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಲು ದಿ; 13.1.2005 ರಂದು ಕೋರಿರುತ್ತಾರೆ. ಸದರಿ ಪತ್ರವನ್ನು ಪರಿಗಣಿಸಿ ಈ ಪ್ರಾಧಿಕಾರದ ಆದೇಶ ಸಂಖ್ಯೆ:ಎಸ್‌ಡಿಕೆ/257/ಡಿಟಿಸಿಆರ್/2004–05 ದಿ: 19.1.2005 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ಅವುಗಳ ಸಂಪೂರ್ಣ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ. ಸದರಿ ಆದೇಶದನುಸಾರ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಕುಲಶೇಖರ ಕೈಕಂಬ, ಮಂಗಳೂರು ಇವರು ದಿ: 18.02.2005 ರಂದು ಅಬಕಾರಿ ಉಪ ನಿರೀಕ್ಷಕರು, ಕುಲಶೇಖರ ಉಪ ವಲಯ ಇವರಿಗೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಹಸ್ತಾಂತರಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಇದರ ನೋಂದಣಿ ಸಂಖ್ಯೆ: ಕೆಎ–09–ಎಂ–3015 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಕಳುಹಿಸಿ ಕೊಡುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು, ಸದರಿಯವರು ದಿ: 6.1.2006 ರಂದು ಸದರಿ ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ಕೆಎ–09–ಎಂ–3015 ರ ನೋಂದಣಿ ವಾಹನವು ಮಾರುತಿ 800 ಕಾರು ಆಗಿದ್ದು, ಇದು 1996 ರ ಮಾಡೆಲ್ ಆಗಿದ್ದು, ಇದರ ಚಾಸೀಸ್ ಎಸ್‌ಬಿ–308–ಐಎನ್–685629 ಮತ್ತು ಇಂಜಿನ್ ನಂ: ಎಫ್8ಬಿಐ ಎನ್ 1038969 ಇದರ ಆರ್.ಸಿ. ನೋಂದಣಿ ಮಾಲೀಕ ಶ್ರೀ ಕೆ. ಸುರೇಶ್, ಬಿನ್: ಕೆ.ಕೃಷ್ಣ ಶೆಟ್ಟಿ, ಮೆ:ನ್ಯೂ ಸರಸ್ವತಿ ಮೆಡಿಕಲ್ಸ್, ನಂ: 604 ರಾಮಾನುಜ ರಸ್ತೆ, ಮೈಸೂರು ಎಂದು ದೃಢೀಕರಿಸಿರುತ್ತಾರೆ.

ಸಾರಿಗೆ ಅಧಿಕಾರಿಗಳು ನೀಡಿರುವ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ ಕೆ.ಸುರೇಶ್ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:22.4.2006 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸನ್ನು ಸದರಿಯವರು ದಿ: 21.6.2006 ರಂದು ಸ್ವೀಕರಿಸಿದ್ದು, ಸದರಿ ನೋಟೀಸಿಗೆ ಉತ್ತರವಾಗಿ ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ: 28.6.2006 ರ ಪತ್ರದಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ದಿ: 15.2.1997 ರಂದು ಶ್ರೀ ಕೆ.ಮುರಳೀಧರ ಬಿನ್: ಕೃಷ್ಣಮೂರ್ತಿ, ನಂ: 1238, 25ನೇ ಮೈನ್ ರೋಡ್, 9ನೇ ಬ್ಲಾಕ್, ಜಯನಗರ, ಬೆಂಗಳೂರು–69 ಇವರಿಗೆ ಮಾರಾಟ ಮಾಡಿರುವುದಾಗಿ, ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮೈಸೂರು ಇವರು ನೀಡಿರುವ ಹಿಂಬರಹದ ಜೆರಾಕ್ಸ್ ಪ್ರತಿಯನ್ನು ತಮ್ಮ ಪತ್ರದೊಂದಿಗೆ ಲಗತ್ತಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಳ್ಳಲಾಗಿರುವ ವಾಹನಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತಮ್ಮ ಅರ್ಜಿಯಲ್ಲಿ ತಿಳಿಸಿರುತ್ತಾರೆ. ನಂತರ ವಾಹನದ ನೋಂದಣಿ ಮಾಲೀಕರಾದ ಶ್ರೀಕೆ.ಮುರಳೀಧರ, ಬಿನ್: ಕೃಷ್ಣ ಮೂರ್ತಿ, ನಂ: 1238, 25ನೇ ಮೈನ್ ರೋಡ್, 9ನೇ ಬ್ಲಾಕ್, ಜಯನಗರ, ಬೆಂಗಳೂರು–69 ಇವರಿಗೆ ಈ ಪ್ರಾಧಿಕಾರದಿಂದ ದಿ: 7.12.2006 ರಂದು ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ

ನೋಟೀಸನ್ನು ದಿ: 26.4.2007 ರಂದು ಪಡೆಯಲಾಗಿದ್ದು, ಸ್ವೀಕೃತಿ ಈ ಕಛೇರಿಗೆ ಬಂದಿರುತ್ತದೆ. ಆದರೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015ನ್ನು ಅಕ್ರಮ ಸಾಗಾಣಿಕೆಗೆ ಭಾಗಿಯಾಗಿಲ್ಲವೆಂದು ಸಾಬೀತುಪಡಿಸಿ, ವಾಹನದ ಮಾಲೀಕತ್ವವನ್ನು ನಿರೂಪಿಸಿ ವಾಹನವನ್ನು ಪಡೆಯಲು ವಾಹನದ ಮಾಲೀಕರು ಅಥವಾ ಆರೋಪಿಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಎರಡನೇ ವಾಹನವಾದ ಮೋಟಾರು ಸೈಕಲ್ ನೋಂದಣಿ ಸಂಖ್ಯೆ: ಕೆಎ–19–ಇ–697 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಅಬಕಾರಿ ಉಪ ನಿರೀಕ್ಷಕರು (ನಂ.2), (ಜಾರಿ ಮತ್ತು ತನಿಖೆ), ಮಂಗಳೂರು ಇವರು ಸಾರಿಗೆ ಅಧಿಕಾರಿ, ಮಂಗಳೂರುರವರಿಂದ ಪಡೆದು ಈ ಪ್ರಾಧಿಕಾರಕ್ಕೆ ದಿ: 13.2.2006 ರಂದು ಸಲ್ಲಿಸಿರುತ್ತಾರೆ. ಸದರಿ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ಕೆಎ–19–ಇ–697 ಬಜಾಜ್ ಮೋಟಾರು ಸೈಕಲ್ ಆಗಿದ್ದು, ಇದರ ಮಾಡೆಲ್ 1990 ಆಗಿರುತ್ತದೆ. ಹಾಗೂ ಚಾಸೀಸ್ ನಂ: 30ಸಿ096–186 ಮತ್ತು ಇಂಜಿನ್ ನಂ:30C09–4317 ಆಗಿದ್ದು, ಇದರ ನೋಂದಣಿ ಮಾಲೀಕ ಮೋಹನ್‌ದಾಸ್ ಶೆಟ್ಟಿ, ಬಿನ್: ದಿವಂಗತ ಮುಂಡಪ್ಪ ಶೆಟ್ಟಿ, ಪಾಲೆಮಾರ್ ಹೌಸ್, ಕೋಣಾಜೆ ಅಂಚೆ, ಮಂಗಳೂರು ತಾಲ್ಲೂಕು ಎಂದು ದೃಢೀಕರಿಸಿರುತ್ತಾರೆ. ಸದರಿ ನೋಂದಣಿ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿ: 3.6.2006 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಿದ್ದು, ಸದರಿಯವರು ದಿ: 7.7.2006 ರಂದು ಕಾರಣ ಕೇಳಿ ನೋಟೀಸನ್ನು ಪಡೆದಿದ್ದು, ಸ್ವೀಕೃತಿ ಈ ಕಛೇರಿಗೆ ಬಂದಿರುತ್ತದೆ

ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಗಳಾದ ಜನಾರ್ಧನ, (32 ವ), ಬಿನ್: ವಟ್ಟು ಗೌಡ, ವಾಸ: ಮಡಪಾಡಿ, ತೆಂಕ ಎಡಪದವು ಗ್ರಾಮ, ಮಂಗಳೂರು ಮತ್ತು ಮೋಹನ (23 ವ), ಬಿನ್: ಮುಂಡಪ್ಪ ಶೆಟ್ಟಿ, ವಾಸ: ಪಾಲೆಮಾರ್ ಕೋಣಾಜೆ ಗ್ರಾಮ, ಮಂಗಳೂರು ಹಾಗೂ ರಾಜೇಶ್ (25 ವ), ಬಿನ್: ವಾಸುದೇವ ದೇವಾಡಿಗ, ವಾಸ: ಕಾವೂರು ಮುಲ್ಲಕಾಡು ಭಜನಾ ಮಂದಿರ ಬಳಿ, ಮಂಗಳೂರು ಇವರುಗಳಿಗೆ ಈ ಪ್ರಾಧಿಕಾರದಿಂದ ದಿ: 3.6.2006 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿಯವರಲ್ಲಿ ರಾಜೇಶ್ ಎಂಬುವರನ್ನು ಬಿಟ್ಟು ಉಳಿದ ಬೇರೆ ಆರೋಪಿಗಳು ಸದರಿ ನೋಟೀಸುಗಳನ್ನು ಸ್ವೀಕರಿಸಿದ್ದು, ಸ್ವೀಕೃತಿ ಪತ್ರವು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ.

ತಕ್ಷೀರಿನ ತನಿಖಾಧಿಕಾರಿಯಾದ ಅಬಕಾರಿ ಉಪ ನಿರೀಕ್ಷಕರು (ನಂ.2), ಜಾರಿ ಮತ್ತು ತನಿಖೆ, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ: 287/2005–06 ದಿ: 13.2.2006 ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಗಳನ್ನು ಹಾಗೂ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ದಿ: 7.2.2007 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಸೊತ್ತುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು 25 ಲೀಟರ್ ಸಾರಾಯಿ ಸ್ಯಾಚೆಟ್ ಹಾಗೂ ಖಾಲಿ ಸಾರಾಯಿ ಸ್ಯಾಚೆಟ್‌ಗಳನ್ನು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಹಾಗೂ ಪಂಚಿಂಗ್ ಮೆಶಿನನ್ನು ಅನುಪಯುಕ್ತಗೊಳಿಸಿ ವಿಲೇವಾರಿ ಮಾಡಲು ಆದೇಶಿಸಿದೆ. ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯಸಾರವನ್ನು ಮೆ: ಗೌರಿ ಇಂಡಸ್ಟ್ರೀಸ್, ಗೌರಿಬಿದನೂರು, ಕೋಲಾರ ಜಿಲ್ಲೆ ಇವರಿಗೆ ರಹದಾರಿ ಮೂಲಕ ಹಸ್ತಾಂತರಿಸಲಾಗಿದೆ. ಸದರಿ ಮದ್ಯಸಾರದ ಮೌಲ್ಯವನ್ನು ಸರಕಾರಕ್ಕೆ ಪಾವತಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ದಕ್ಷಿಣ, ಬೆಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿ: 23.09.2006 ಮತ್ತು ದಿ: 21.4.2007 ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015ಕ್ಕೆ ಸಂಬಂಧಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಇವರ ವರದಿ ಸಂಖ್ಯೆ: 6.1.2006 ರ ಪತ್ರದಲ್ಲಿ ತಿಳಿಸಿರುವಂತೆ ಸದರಿ ವಾಹನಕ್ಕೆ ಸಂಬಂಧಿಸಿ ದಿ: 15.2.1997 ರಿಂದ ಅನ್ವಯವಾಗುವಂತೆ ತಮ್ಮ ಕಛೇರಿಗೆ ಸಿ.ಸಿ. ಯನ್ನು ನೀಡಿರುವುದಾಗಿ ದೃಢೀಕರಿಸಿರುವುದು ಕಂಡು ಬರುತ್ತದೆ. ಆದುದರಿಂದ ತಮ್ಮ ಕಛೇರಿಗೆ ಸಿ.ಸಿ. ಯನ್ನು ನೀಡಿದ ನಂತರ, ಸದರಿ ವಾಹನದ ನೋಂದಣಿ ಮಾಲೀಕತ್ವದ ಬದಲಾವಣೆಯಾಗಿದ್ದಲ್ಲಿ, ಸದರಿ ವಾಹನದ ಮಾಲೀಕತ್ವದ ಬಗ್ಗೆ ವಿವರಗಳನ್ನು ನೋಂದಣಿ ಬಿ ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಮೂಲಕ ಈ ಪ್ರಾಧಿಕಾರಕ್ಕೆ ಕಳುಹಿಸಿ ಕೊಡಲು ಕೋರಲಾಗಿದೆ. ಆದರೆ ಸಾರಿಗೆ ಅಧಿಕಾರಿಯವರಿಂದ ಇದುವರೆಗೂ ಯಾವುದೇ ಉತ್ತರ ಬಂದಿರುವುದಿಲ್ಲ.

1965 ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿ: 11.1.2005 ರಂದು ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015 ಮತ್ತು ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಇ–697 ರಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಗಳು ನಕಲಿ ಸಾರಾಯಿಯನ್ನು ತಯಾರಿಸಿ, ಅಕ್ರಮ ದಂಧೆಗೆ ಸದರಿ ವಾಹನಗಳಲ್ಲಿ ಮೂಡಬಿದ್ರೆಯ ನಿವಾಸಿ ಸತೀಶ್ ಎಂಬುವರಿಗೆ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ ಹಾಗೂ ನಕಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸುವ ಘಟಕವನ್ನು ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಕುಲಶೇಖರ ಕೈಕಂಬ, ಮಂಗಳೂರು ಇವರು ಅಕ್ರಮ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆಗೆ ಬಳಸಲಾದ ವಾಹನಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನಗಳಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರ, ಸಾರಾಯಿಯಾಗಿದ್ದು, ಸದ್ರಿ ವಾಹನಗಳನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015 ಮತ್ತು ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಇ–697 ರಲ್ಲಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಗಳು ನಕಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸಿ ವಾಹನಗಳಲ್ಲಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿರುತ್ತದೆ. ಸದರಿ ಸಾಗಾಣಿಕೆಗೆ ಬಳಸಿದ ವಾಹನದಲ್ಲಿ ವಶಪಡಿಸಿಕೊಂಡ ಮೋಟಾರು ಸೈಕಲ್‌ನ ನೋಂದಣಿ ಮಾಲೀಕ ಶ್ರೀ ಮೋಹನ್‌ದಾಸ್ ಶೆಟ್ಟಿರವರು ಆರ್.ಸಿ. ಮಾಲೀಕರಾಗಿದ್ದು, ಇವರು ತಕ್ಷೀರಿನಲ್ಲಿ ದಸ್ತಗಿರಿಯಾದ ಎರಡನೇ ಆರೋಪಿಯಾಗಿದ್ದು, ಇವರು ಅಕ್ರಮ ನಕಲಿ ಸಾರಾಯಿ ಉತ್ಪಾದನೆಯಲ್ಲಿ ಭಾಗಿಯಾಗಿದ್ದು, ಇವರ ವಾಹನವನ್ನು ಸಾಗಾಣಿಕೆಗೆ ಬಳಸಿರುವುದು ಹಾಗೂ ವಾಹನದ ಮಾಲೀಕರು ಇದರಲ್ಲಿ ಶಾಮೀಲಾಗಿರುವುದರಲ್ಲಿ ಯಾವುದೇ ಸಂಶಯ ಇರುವುದಿಲ್ಲವೆಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಸದರಿ ವಾಹನಗಳನ್ನು ವಶಪಡಿಸಿಕೊಂಡು ಸುಮಾರು 3 ವರ್ಷ 7 ತಿಂಗಳಿಗಿಂತ ಹೆಚ್ಚು ಸಮಯ ಕಳೆದರೂ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಗಳು ಅಥವಾ ವಾಹನಗಳ ಆರ್.ಸಿ. ಮಾಲೀಕರು ವಾಹನಕ್ಕೆ ಸಂಬಂಧಿಸಿ ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯಸಾರ ಮತ್ತು ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೆ ವಾಹನವನ್ನು ಪಡೆಯಲು ವಾಹನದ ದಾಖಲಾತಿಗಳೊಂದಿಗೆ ಮುಂದೆ ಬಾರದಿರುವುದಿಂದ, ವಾಹನಗಳನ್ನು ಅಕ್ರಮ ಸಾಗಾಣಿಕೆಗೆ ಬಳಸಿರುವುದು ಎಂಬುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಆದುದರಿಂದ ವಶಪಡಿಸಿಕೊಂಡ ವಾಹನಗಳನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಕಾರಣ ಅಕ್ರಮ ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015 ಮತ್ತು ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಇ–697 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಗ್ರಾಮಾಂತರ ಪೊಲೀಸ್ ಠಾಣೆ, ಕುಲಶೇಖರ ಕೈಕಂಬ, ಮಂಗಳೂರು ಇವರ ತಕ್ಷೀರು ಸಂಖ್ಯೆ: 12/2005 ದಿ: 11.1.2005 ರಲ್ಲಿ ಅಕ್ರಮ ಮದ್ಯಸಾರ ದಾಸ್ತಾನು ಹೊಂದಿ ನಕಲಿ ಸಾರಾಯಿ ಉತ್ಪಾದನೆಯಲ್ಲಿ ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಕೆಎ–09–ಎಂ–3015 ಮತ್ತು ಮೋಟಾರು ಸೈಕಲ್ ಸಂಖ್ಯೆ: ಕೆಎ–19–ಇ–697 ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 9.9.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್. 1100

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/244/ಡಿಟಿಸಿಆರ್/2005–06, ದಿನಾಂಕ: 22ನೇ ಅಕ್ಟೋಬರ್ 2008**

**ಉಪಸ್ಥಿತರು** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು (1) | ರಾಜು ಬಂಗೇರಾ, (50ವ) ಬಿನ್:ಅಣ್ಣು ಬಂಗೇರಾ, |
| ಜಾರಿ ಮತ್ತು ತನಿಖೆ, ಬೆಳ್ತಂಗಡಿ | ಮನೆ ನಂ:1–165 ಬೈಲಾಜೆ ಮನೆ, ಹೊಸ್ಮಾರ್, |
| | ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ (ಕಾರಿನ ಚಾಲಕ ಹಾಗೂ ಮಾಲಿಕ) |
| | **ಅರ್ಜಿದಾರರು:** |
| | ರಾಜು ಎ.ಬಂಗೇರಾ, (50ವ) ಬಿನ್:ಅಣ್ಣು ಬಂಗೇರಾ, |
| | ಮನೆ ನಂ:1–165 ಬೈಲಾಜೆ ಮನೆ, ಹೊಸ್ಮಾರ್ ಅಂಚೆ, |
| | ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರು ತಮ್ಮ ಸಿಬ್ಬಂದಿಯವರೊಂದಿಗೆ ದಿ: 7.11.2005 ರಂದು ರಾತ್ರಿ 8–10 ಗಂಟೆ ಸಮಯಕ್ಕೆ ದೊರೆತ ಖಚಿತ ವರ್ತಮಾನದ ಮೇರೆಗೆ ಮದ್ಯಡ್ಕ ಎಂಬಲ್ಲಿ ಕಾಯುತ್ತಿರುವ ಸಂದರ್ಭದಲ್ಲಿ ಬಿ.ಸಿರೋಡ್ ಕಡೆಯಿಂದ ಬೆಳ್ತಂಗಡಿ ಕಡೆಗೆ ವೇಗವಾಗಿ ಬರುತ್ತಿದ್ದ ಅಂಬಾಸಿಡರ್ ಕಾರನ್ನು ನಿಲ್ಲಿಸಲು ಸೂಚನೆ ನೀಡಿದಾಗ ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಗಲಿಬಿಲಿಯಲ್ಲಿ ಕಾರನ್ನು ಮುಂದಕ್ಕೆ ಚಲಾಯಿಸಿ ಮದ್ಯಡ್ಕ ಭಜನಾ ಮಂದಿರದ ಎದುರುಗಡೆ ಓಡಿಹೋಗಲು ಪ್ರಯತ್ನಿಸಿದ್ದು, ಸಿಬ್ಬಂದಿಯವರ ಸಹಾಯದಿಂದ ಕಾರಿನ ಚಾಲಕನನ್ನು ಬೆನ್ನಟ್ಟಿ ವಿಚಾರಿಸಿದಾಗ ಅದರಲ್ಲಿ ಸಾರಾಯಿ ತುಂಬಿದ ಸ್ಯಾಚೇಟುಗಳು ಇರುವುದು ಕಂಡುಬಂತು. ಸದ್ರಿ 5 ಪ್ಲಾಸ್ಟಿಕ್ ಗೋಣಿ ಚೀಲದಲ್ಲಿ 100 ಎಂಎಲ್‌ನ ತಲಾ 500 ರಂತೆ ಒಟ್ಟು 2500 ಸಾರಾಯಿ ಸ್ಯಾಚೇಟುಗಳು ಇರುವುದಾಗಿ, ಸಾರಾಯಿಯನ್ನು ಅಕ್ರಮವಾಗಿ ಮಾರಾಟ ಮಾಡುವ ಉದ್ದೇಶದಿಂದ ಸಾಗಿಸುತ್ತಿರುವುದಾಗಿ ಚಾಲಕನು ತಿಳಿಸಿರುತ್ತಾನೆ. ಸದ್ರಿ ಸಾರಾಯಿ ಸ್ಯಾಚೇಟುಗಳಲ್ಲಿ 100 ಎಂಎಲ್‌ನ 35 ಡಿಗ್ರಿ ಯು.ಪಿ. ಜೆ.ಪಿ. ಡಿಸ್ಟಿಲರಿ ಪ್ರೈ ಲಿಮಿಟೆಡ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ. ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಲ್ಪಟ್ಟಿದ್ದು ಹಾಗೂ ಮದ್ಯಪಾನ ಆರೋಗ್ಯಕ್ಕೆ ಹಾನಿಕಾರಕವೆಂಬುದಾಗಿ ಕೆಂಪು ಅಕ್ಷರದಲ್ಲಿ ಮುದ್ರಿತವಾಗಿರುತ್ತದೆ. ಪ್ರತಿ ಪ್ಲಾಸ್ಟಿಕ್ ಗೋಣಿ ಚೀಲದಿಂದ 100 ಎಂಎಲ್‌ನ ತಲಾ 10 ರಂತೆ ಒಟ್ಟು 50 ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಅದನ್ನು ಲಕೋಟೆಗೆ ಹಾಕಿ ಬಟ್ಟೆದಾರರಿಂದ ಕಟ್ಟಿ ಇಲಾಖಾ ಮೊಹರು ಮಾಡಲಾಯಿತು. ಚಾಲಕನ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಆತನು ತನ್ನ ಹೆಸರು ರಾಜು ಬಂಗೇರಾ, (50 ವ) ಬಿನ್: ಅಣ್ಣು ಬಂಗೇರಾ ಮನೆ ನಂ:1–165, ಬೈಲಾಜೆ ಮನೆ, ಹೊಸ್ಮಾರ್ ಕಾರ್ಕಳ ತಾಲ್ಲೂಕು ಎಂಬುದಾಗಿ ತಿಳಿಸಿರುತ್ತಾನೆ. ನಂತರ ಸಾಗಾಣಿಕೆಗೆ ಬಳಸಿದ ಅಂಬಾಸಿಡರ್ ಕಾರನ್ನು ಪರಿಶೀಲಿಸಿದಾಗ ಇದರ ನೊಂದಣಿ ಸಂ: ಸಿಎನ್‌ಜಿ–7510 ಇದರ ಇಂಜಿನ್ ನಂ:PT – No:565394, OEJ 22740 ಎಂಬುದಾಗಿ ಕಂಡುಬಂತು. ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11,14,15 ಮತ್ತು 32,34, 38ಎ ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸಾರಾಯಿ ಸ್ಯಾಚೇಟುಗಳನ್ನು ಹಾಗೂ ಅಂಬಾಸಿಡರ್ ಕಾರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಸ್ಥಳದಲ್ಲಿ ಮಹಜರು ತಯಾರಿಸಿ ಆರೋಪಿಯನ್ನು ಸ್ಥಳದಲ್ಲಿ ದಸ್ತಗಿರಿ ಮಾಡಿ, ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 22/2005–06 ದಿ:7.11.2005ರಂತೆ ಪ್ರಕರಣವನ್ನು ನೋಂದಾಯಿಸಿ ಮಾನ್ಯ ನ್ಯಾಯಾಲಯಕ್ಕೆ ವರದಿಯನ್ನು ಒಪ್ಪಿಸಿರುತ್ತಾರೆ.

ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (ನಂ.1), ಜಾರಿ ಮತ್ತು ತನಿಖೆ, ಬೆಳ್ತಂಗಡಿ ಇವರ ಪ್ರಥಮ ತನಿಖಾ ವರದಿ ಸಂಖ್ಯೆ: ಸಿಆರ್‌ಎಂ/22/2005–06 ದಿ:31.5.2006ರ ವರದಿಯಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ:ಸಿಎನ್‌ಜಿ–7510 ರ ಬಿ ಎಕ್ಸ್‌ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಎಕ್ಸ್‌ಟ್ರ್ಯಾಕ್ಟ್ ವರದಿಯಲ್ಲಿ ವಾಹನದ ನೋಂದಣಿ ಮಾಲೀಕ ರಾಜು ಬಂಗೇರಾ, 50ವ ಬಿನ್:ಅಣ್ಣು ಬಂಗೇರಾ ಮನೆ ನಂ:1–165, ಬೌಲಾಜೆ ಮನೆ, ಹೊಸ್ಮಾರ್ ಕಾರ್ಕಳ ತಾಲ್ಲೂಕು ಎಂದು ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಯಾಗಿರುತ್ತಾನೆ ಎಂದು ದೃಢೀಕರಿಸಿರುತ್ತಾರೆ. ಮತ್ತು ಸ್ಯಾಂಪಲ್‌ಗಾಗಿ ತೆಗೆದ ಸಾರಾಯಿ ಸ್ಯಾಚೇಟುಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಕರ್ನಾಟಕ ಸರ್ಕಾರ ರಾಸಾಯನಿಕ ವಿಶ್ಲೇಷಕರು ಇವರ ವರದಿ ಸಂ:ಇ–561 ದಿ:21.11.2005ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ 35% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ.

ರಾಜು ಬಂಗೇರಾ, (50 ವರ್ಷ) ಬಿನ್:ಅಣ್ಣು ಬಂಗೇರಾ ಮನೆ ನಂ:1–165, ಬೈಲಾಜೆ ಮನೆ, ಹೊಸ್ಮಾರ್ ಕಾರ್ಕಳ ತಾಲ್ಲೂಕು ಇವರು ತಮ್ಮ ವಕೀಲರ ಮುಖಾಂತರ ದಿನಾಂಕ: 30.06.2006 ರಂದು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ. ಮತ್ತು ಉಡುಪಿ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂ: ಸಿಎನ್‌ಜಿ:7510 ರ ನೋಂದಣಿ ಮಾಲಿಕನಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವು ಅಕ್ರಮ ಸಾರಾಯಿ ಸಾಗಾಣಿಕೆಗೆ ಭಾಗಿಯಾಗಿರುವುದಿಲ್ಲ. ಸದ್ರಿ ಅಂಬಾಸಿಡರ್ ಕಾರನ್ನು ತನಗೆ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರಿನ ಮೌಲ್ಯವನ್ನು ಪಡೆದುಕೊಳ್ಳುವ ಬಗ್ಗೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಗೆ ಈ ಪ್ರಾಧಿಕಾರದ ದಿ:31.7.2006ರಂದು ಪತ್ರ ಬರೆಯಲಾಗಿದ್ದು, ಸದ್ರಿ ಪತ್ರದ ಅನುಸಾರ ವಾಹನದ ಈಗಿನ ಮಾರುಕಟ್ಟೆ ಮೌಲ್ಯ ರೂ.7,000/–ಗಳಾಗಬಹುದೆಂದು ಅಂದಾಜಿಸಿ ದಿ:2.8.2006ರಂದು ದೃಢೀಕರಣ ಪತ್ರ ನೀಡಿರುತ್ತಾರೆ.

ವಾಹನ ಮಾಲೀಕರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದಿಂದ ದಿ:11.8.2006ರಂದು ನೋಂದಾವಣೆ ಅಂಚೆ ಮೂಲಕ ನೀಡಲಾಗಿರುತ್ತದೆ. ಸದ್ರಿ ನೋಟಿಸು ದಿನಾಂಕ: 16.8.2006 ರಂದು ಸ್ವೀಕೃತಿಯಾಗಿ, ಸ್ವೀಕೃತಿ ರಶೀದಿ ಈ ಕಚೇರಿಗೆ ಬಂದಿರುತ್ತದೆ. ಆದರೆ ಇದುವರೆಗೂ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಉತ್ತರವನ್ನು ನೀಡಿರುವುದಿಲ್ಲ.

ವಾಹನ ಬಿಡುಗಡೆಗಾಗಿ ಸಲ್ಲಿಸಿದ್ದ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಜಕ ನಿರ್ದೇಶಕರವರ ಅಭಿಪ್ರಾಯವನ್ನು ಕೇಳಲಾಗಿ ಅವರು ದಿ:14.9.2006ರ ವರದಿಯಲ್ಲಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬಾರದೆಂದು ವಾದ ಮಂಡಿಸಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇಐಬಿ ದ.ಕ.ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದ ಆದೇಶ ಸಂ:ಇಐಬಿ:ಡಿಟಿಸಿಆರ್:244:2005–06 ದಿ:19.10.2006ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿದ್ದಲ್ಲಿ ಪುನಹ ಸದ್ರಿ ವಾಹನವನ್ನು ವಿಚಾರಣೆಗೆ ತರಿಸಿಕೊಳ್ಳಲು ಕಷ್ಟ ಸಾಧ್ಯವಾಗುತ್ತದೆ ಹಾಗೂ ಸದ್ರಿ ವಾಹನವನ್ನು ಪುನಹಃ ಇಂತಹ ಅಪರಾಧಕ್ಕಾಗಿ ಬಳಸುವ ಸಾಧ್ಯತೆಯಿರುವುದರಿಂದ ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ಆದೇಶ ನೀಡಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇಐಬಿ ದ.ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ:ಇಐಬಿ:ಡಿಟಿಸಿಆರ್:244:05–06 ದಿ:29.11.2006ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೇಟುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಯಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿ ಸ್ಯಾಚೇಟುಗಳನ್ನು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿರುತ್ತಾರೆ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿ ರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 7.11.2005 ರಂದು ಅಂಬಾಸಿಡರ್ ಕಾರು ಸಂಖ್ಯೆ: ಸಿಎನ್‌ಜಿ–7510 ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಸಾರಾಯಿ ಸಾಗಾಣಿಕೆ ಮಾಡಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಮಂಗಳೂರು ಉತ್ತರ ಇವರು ದಿ:7.12.2006 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಮೇ–2005ರಿಂದ ಮೇ–2006ರವರೆಗೆ ಅಬಕಾರಿ ಉಪ ನಿರೀಕ್ಷಕನಾಗಿ ಬೆಳ್ತಂಗಡಿ ಜಾರಿ ಮತ್ತು ತನಿಖೆ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೆ. ದಿ:7.11.2005ರಂದು ಸಂಜೆ 7–00 ಗಂಟೆ ಸುಮಾರಿಗೆ ತಾನು ಕಛೇರಿಯಲ್ಲಿದ್ದು ಆ ಸಮಯಕ್ಕೆ ಕಾರಿನ ಮುಖಾಂತರ ಸಾರಾಯಿ ಸ್ಯಾಚೇಟುಗಳನ್ನು ಅಕ್ರಮವಾಗಿ ಸಾಗಾಟ ಮಾಡಲಾಗುತ್ತದೆ ಎಂಬ ದೊರೆತ ಖಚಿತ ವರ್ತಮಾನದೊಂದಿಗೆ ತಮ್ಮ ಸಿಬ್ಬಂದಿಯೊಂದಿಗೆ ಮಡಂತ್ಯಾರ್ ರಸ್ತೆಗೆ ತಲುಪಿ ರಸ್ತೆ ಗಾವಲು ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ರಾತ್ರಿ 8–10 ಗಂಟೆ ಸಮಯಕ್ಕೆ ಬಿ.ಸಿ. ರೋಡ್ ಕಡೆಯಿಂದ ಬೆಳ್ತಂಗಡಿ ಕಡೆಗೆ ಅಂಬಾಸಿಡರ್ ಕಾರು ವೇಗವಾಗಿ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚಿಸಿದಾಗ ಕಾರಿನ ಚಾಲಕ ಅತೀ ವೇಗವಾಗಿ ಚಲಾಯಿಸಿಕೊಂಡು ಮುಂದೆ ಹೋಗಿದ್ದು, ಸಂಶಯದ ಮೇರೆಗೆ ವಾಹನವನ್ನು ಬೆನ್ನಟ್ಟಿ ಮದಡ್ಕ ಎಂಬಲ್ಲಿ ಸದ್ರಿ ಕಾರನ್ನು

ತಡೆದು ನಿಲ್ಲಿಸಿದಾಗ ಕಾರಿನ ಚಾಲಕ ಓಡಿಹೋಗಲು ಪ್ರಯತ್ನಿಸಿದ್ದು, ಅಷ್ಟರಲ್ಲಿ ಸಿಬ್ಬಂದಿಯವರ ಸಹಾಯದಿಂದ ಆತನನ್ನು ಹಿಡಿದು ಸದ್ರಿ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಹಿಂಬದಿಯ ಸೀಟಿನ ಕಾಲು ಇಡುವ ಜಾಗದಲ್ಲಿ ಎರಡು ಪ್ಲಾಸ್ಟಿಕ್ ಗೋಣಿಚೀಲಗಳಿದ್ದು, ಹಾಗೂ ಡಿಕ್ಕಿಯೊಳಗೆ ಮೂರು ಪ್ಲಾಸ್ಟಿಕ್ ಗೋಣಿ ಚೀಲಗಳಿದ್ದವು. ಪ್ರತಿ ಗೋಣಿ ಚೀಲದಲ್ಲಿ 100 ಎಂಎಲ್‌ನ 500 ಸಾರಾಯಿ ಸ್ಯಾಚೇಟುಗಳು ಇದ್ದು, ಒಟ್ಟು 2500 ಸಾರಾಯಿ ಸ್ಯಾಚೇಟುಗಳು ಕಂಡುಬಂದವು. ಸದ್ರಿ ವಾಹನವು ಅಂಬಾಸಿಡರ್ ಕಾರು ಆಗಿದ್ದು ಅದರ ನಂಬರ್ ಪ್ಲೇಟನ್ನು ನೋಡಲಾಗಿ ಸಿಎನ್ ಜಿ–7510 ಎಂದು ನಮೂದಿಸಲಾಗಿತ್ತು. ಅದು ಬಿಳಿ ಬಣ್ಣದ ಅಂಬಾಸಿಡರ್ ಕಾರು ಆಗಿರುತ್ತದೆ. ವಾಹನದ ಚಾಸೀಸ್ ನಂಬರ್ ಮತ್ತು ಇಂಜಿನ್ ನಂಬರನ್ನು ಪರಿಶೀಲಿಸಿ ನೋಡಿದೆವು. ಸಾರಾಯಿ ಸ್ಯಾಚೇಟುಗಳನ್ನು ವಾಹನದಲ್ಲಿ ಸಾಗಿಸಲು ಪರ್ಮಿಟ್ ಆತನಲ್ಲಿ ಇರುವುದಿಲ್ಲ. ವಾಹನವು ಪರಿಶೀಲಿಸುವ ಮುನ್ನ ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲ. ಸದ್ರಿ ಕಾರಣಗಳನ್ನು ನಮೂದಿಸಿ ಸ್ಥಳದಲ್ಲಿ ಸರ್ಚ್ ಮೆಮೋವನ್ನು ತಯಾರಿಸಿದರು. ಪ್ರತಿ ಗೋಣಿಚೀಲದಿಂದ ತಲಾ 10 ಸಾರಾಯಿ ಸ್ಯಾಚೇಟುಗಳನ್ನು ಪ್ರತ್ಯೇಕಿಸಿ ಮಾದರಿಗಾಗಿ ಒಟ್ಟು 5 ಲಕೋಟೆಗಳನ್ನು ತಯಾರಿಸಿದೆವು. ಸದ್ರಿ ಲಕೋಟೆಗಳಿಗೆ ಬಟ್ಟೆಯನ್ನು ಸುತ್ತಿ ಇಲಾಖಾ ಸೀಲಿನಿಂದ ಮೊಹರನ್ನು ಮಾಡಿರುತ್ತಾರೆ. ಸ್ಥಳದಲ್ಲಿಯೇ ಮಾದರಿ ಸೀಲನ್ನು ತಯಾರಿಸಿರುತ್ತಾರೆ. ಆರೋಪಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ರಾಜು ಬಂಗೇರಾ, 50ವ ಬಿನ್:ಅಣ್ಣು ಬಂಗೇರಾ ಮನೆ ನಂ:1–165, ಬೈಲಾಜೆ ಮನೆ, ಹೊಸ್ಮಾರ್ ಕಾರ್ಕಳ ತಾಲ್ಲೂಕು ಎಂದು ತಿಳಿಸಿರುತ್ತಾನೆ. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿದ್ದೇನೆ. ಮಹಜರಿಗೆ ಸ್ಥಳೀಯ 2 ಜನರ ಸಹಿಯನ್ನು ಪಡೆದಿರುತ್ತಾರೆ. ಮಹಜರಿನ ಮೂಲ ಪ್ರತಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು, ಮಹಜರಿನ ಜೆರಾಕ್ಸ್ ಪ್ರತಿಯನ್ನು ನಿಶಾನೆ ಪಿ–1 ಎಂದು ಮತ್ತು ತನ್ನ ಸಹಿಯನ್ನು ನಿಶಾನೆ ಪಿ–1 ಎ ಎಂದು ಗುರುತಿಸಲಾಯಿತು. ಪ್ರಥಮ ಮಾಹಿತಿ ವರದಿಯ ಮೂಲ ಪ್ರತಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು ಇದರ ಜೆರಾಕ್ಸ್ ಪ್ರತಿಯನ್ನು ನಿಶಾನೆ ಪಿ–2 ಎಂದೂ ಹಾಗೂ ಸದ್ರಿ ಸೊತ್ತುಗಳನ್ನು ವಶದಲ್ಲಿಟ್ಟುಕೊಳ್ಳಲು ನೀಡಿದ ಅನುಮತಿ ಆದೇಶವನ್ನು ನಿಶಾನೆ ಪಿ–3 ಎಂದೂ, ಸಹಾಯಕ ರಾಸಾಯನಿಕ ವಿಶ್ಲೇಷಕರು ನೀಡಿದ ವರದಿಯನ್ನು ನಿಶಾನೆ ಪಿ–4 ಎಂದೂ ಹಾಗೂ ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ನಿಶಾನೆ ಪಿ–5 ಎಂದೂ ಗುರುತಿಸಲಾಯಿತು ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತಮ್ಮ ಕಛೇರಿಯಿಂದ ಹೊರಡುವಾಗ ಕಛೇರಿಯ ದಿನಚರಿಯ ಚಲನ ವಲನ ವಹಿಯಲ್ಲಿ ನಮೂದಿಸಿರುತ್ತೇನೆ. ಸದ್ರಿ ವಹಿಯನ್ನು ಈಗ ಹಾಜರುಪಡಿಸಿರುವುದಿಲ್ಲ. ಸದ್ರಿ ದಿನಾಂಕದಂದು ಇಲಾಖಾ ವಾಹನದಲ್ಲಿ ತಕ್ಷೀರು ನಡೆದ ಸ್ಥಳಕ್ಕೆ ಹೋಗಿರುತ್ತೇನೆ. ಸದ್ರಿ ವಾಹನದ ಚಾಲಕ ದೇವೇಂದ್ರರಾಗಿರುತ್ತಾರೆ ಮಡಂತ್ಯಾರ್ ಅಂಚೆ ಕಛೇರಿಯ ರಸ್ತೆಯ ತಿರುವಿನಲ್ಲಿ ವಾಹನವನ್ನು ನಿಲ್ಲಿಸಿದೆವು. ಸದ್ರಿ ಸ್ಥಳಕ್ಕೆ ಬಂದ ನಂತರ ಹಲವಾರು ವಾಹನಗಳನ್ನು ತಪಾಸಣೆ ಮಾಡಿದ್ದೆವು. ಪ್ರಕರಣದ ಎರಡು ಜನ ಸ್ವತಂತ್ರ ಸಾಕ್ಷಿದಾರರನ್ನು ದಾರಿಯಲ್ಲಿಯೇ ಸಿಕ್ಕಿದವರು, ಸದ್ರಿ ಕಾರನ್ನು ಬೆನ್ನಟ್ಟಿ ನಿಲ್ಲಿಸಿದ್ದೆವು, ಸದ್ರಿ ಎರಡು ಜನ ಸ್ವತಂತ್ರ ಸಾಕ್ಷಿದಾರರು ಮದಡ್ಕ ದ ಆಸುಪಾಸಿನವರು ಎಂದರೆ ಸರಿ, ಮೊದಲೇ ಬಂದ ಖಚಿತ ವರ್ತಮಾನದಲ್ಲಿ ವಾಹನದ ನೊಂದಣಿ ಸಂಖ್ಯೆ ಅದರ ಬಣ್ಣ ಇತ್ಯಾದಿ ಬಗ್ಗೆ ಮಾಹಿತಿ ಬಂದಿದ್ದು, ಸದ್ರಿ ಕಾರನ್ನು ಪರಿಶೀಲಿಸುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್‌ವಾರೆಂಟ್ ಪಡೆದುಕೊಂಡಿರುವುದಿಲ್ಲ ಆದರೆ ಸರ್ಚ್ ವಾರೆಂಟ್ ಪಡೆದುಕೊಳ್ಳಲು ಕಾಲಾವಕಾಶವಿಲ್ಲವೆಂದು ಕಾರಣಗಳನ್ನು ನಮೂದಿಸಿ ಸರ್ಚ್‌ಮೆಮೋವನ್ನು ಸ್ಥಳದಲ್ಲಿಯೇ ತಯಾರಿಸಿರುತ್ತೇವೆ. ಸದ್ರಿ ವಾಹನದಿಂದ ಯಾವುದೇ ಸಾರಾಯಿಯನ್ನು ತಾನು ವಶಪಡಿಸಿಕೊಂಡಿಲ್ಲವೆನ್ನುವುದು ಸರಿಯಲ್ಲ. ವಾಹನ ಮಾಲೀಕರ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆಂದರೆ ಸರಿಯಲ್ಲ. ಪ್ರಕರಣದ ಎಲ್ಲಾ ದಾಖಲೆಗಳನ್ನು ತಮ್ಮ ಕಛೇರಿಯಲ್ಲಿಯೇ ತಯಾರಿಸಿರುತ್ತೇನೆಂದರೆ ಸರಿಯಲ್ಲವೆಂದು ತಮ್ಮ ಸಾಕ್ಷ್ಯವನ್ನು ನುಡಿದಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

ಈ ಪ್ರಕರಣದ ಫಿರ್ಯಾದುದಾರರ ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:7.11.2005ರಂದು ಜಪ್ತು ಪಡಿಸಿರುವ ಅಂಬಾಸಿಡರ್ ಕಾರು ಸಂ: ಸಿಎನ್‌ಜಿ–7510 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಸಾರಾಯಿಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸು ನೀಡಿದ್ದರೂ ಅದಕ್ಕೆ ಉತ್ತರವನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಪ್ರತಿರಕ್ಷಾ ಪರ ಸಾಕ್ಷಿ ವಿಚಾರಣೆ ಮಾಡಲು ಅರ್ಜಿದಾರರ ಪರ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು ಬಹಳಷ್ಟು ಕಾಲಾವಕಾಶ ನೀಡಿದ್ದರೂ ಅರ್ಜಿದಾರರ ಪರ ವಕೀಲರು ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ ವಾಹನ ಮಾಲೀಕರು ತಮ್ಮ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಹಾಗೂ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಯು ವಾಹನದ ನೋಂದಣಿ ಮಾಲೀಕರಾಗಿದ್ದು, ತಕ್ಷೀರು ನಡೆದ ಸಂದರ್ಭದಲ್ಲಿ

ತನ್ನ ವಾಹನದಲ್ಲಿ ಯಾವುದೇ ರಹದಾರಿ ಪತ್ರವಿಲ್ಲದೇ ಸಾರಾಯಿಯನ್ನು ಸಾಗಾಣಿಕೆ ಮಾಡಿರುವುದೆಂದು ಮಹಜರಿನಲ್ಲಿ ನಮೂದಿಸಿರುತ್ತಾರೆ. ಅಲ್ಲದೇ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತು ಪಡಿಸಲು ವಿಫಲರಾಗಿರುವುದರಿಂದ ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಅಂಬಾಸಿಡರ್ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಅಂಬಾಸಿಡರ್ ಕಾರು ಸಂ: ಸಿಎನ್‌ಜಿ–7510ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಬೆಳ್ತಂಗಡಿ ಇವರ ತಕ್ಷೀರು ಸಂಖ್ಯೆ: 22/2005–06 ದಿ: 7.11.2005 ರಲ್ಲಿ ಜಪ್ತುಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ: ಸಿಎನ್‌ಜಿ–7510 ನ್ನು ನಿಯಮ 43ಎ(2) ರನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:22.10.2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:–**

ಪ್ರಾ.ಸಾ–I: ಶ್ರೀ ಸತೀಶ್ ಕುಮಾರ್, ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ ಮಂಗಳೂರು ಉತ್ತರ

**ಅನುಬಂಧ– II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ಮಹಜರು ಪ್ರತಿ
ನಿಶಾನೆ ಪಿ–1ಎ : ಫಿರ್ಯಾದುದಾರರು ಹಾಕಿದ ಮಹಜರಿನ ಸಹಿ
ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ.
ನಿಶಾನೆ ಪಿ–3 : ಸದ್ರಿ ಸೊತ್ತುಗಳನ್ನು ಫಿರ್ಯಾದುದಾರರ ವಶದಲ್ಲಿ ಇಡಲು ನೀಡಿದ ಅನುಮತಿ ಪತ್ರ.
ನಿಶಾನೆ ಪಿ–4 : ರಸಾಯನಿಕ ಕೆಮಿಕಲ್ ವರದಿ
ನಿಶಾನೆ ಪಿ–5 : ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿ

**ಅನುಬಂಧ– III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:–

ಅರ್ಜಿದಾರರು ಹೇಳಿಕೆ:– – ಯಾವುದು ಇಲ್ಲ–

**ಅನುಬಂಧ– IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:– – ಯಾವುದು ಇಲ್ಲ –

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1319